

ಕರ್ನಾಟಕ ಸರ್ಕಾರ

# ಕರ್ನಾಟಕದಲ್ಲಿ
# ಬಾಲ ಕಾರ್ಮಿಕ ಪದ್ಧತಿಯ
# ನಿರ್ಮೂಲನಕ್ಕೆ ಸಂಬಂಧಿಸಿದ
# ಕ್ರಿಯಾ ಯೋಜನೆಯ ಅನುಷ್ಠಾನಕ್ಕಾಗಿ
# ಆಡಳಿತಾತ್ಮಕ ಮಾರ್ಗದರ್ಶಿ ಸೂಚಿಗಳು

ಕಾರ್ಮಿಕ ಇಲಾಖೆ

# ಕರ್ನಾಟಕದಲ್ಲಿ
# ಬಾಲ ಕಾರ್ಮಿಕ ಪದ್ಧತಿಯ
# ನಿರ್ಮೂಲನಕ್ಕೆ ಸಂಬಂಧಿಸಿದ
# ಕ್ರಿಯಾ ಯೋಜನೆಯ ಅನುಷ್ಠಾನಕ್ಕಾಗಿ
# ಆಡಳಿತಾತ್ಮಕ ಮಾರ್ಗದರ್ಶಿ ಸೂಚಿಗಳು

"ನಾನೊಂದು ಮಗು"

ನನ್ನ ಬರುವಿಕೆಗಾಗಿ ಇಡೀ ಜಗತ್ತು ಕಾಯುತ್ತಿದೆ
ಸಮಸ್ತ ಜಗತ್ತು ನಾನು ಏನಾಗುತ್ತೇನೆಂಬುದನ್ನು
ಕುತೂಹಲದಿಂದ ಗಮನಿಸುತ್ತದೆ
ನಾಗರಿಕತೆ ತೂಗುಯ್ಯಾಲೆಯಲ್ಲಿದೆ.
ಏಕೆಂದರೆ, ನಾನು ಏನಾಗುತ್ತೇನೆಯೋ
ನಾಳಿನ ಜಗತ್ತೋ ಅದೇ ಆಗುತ್ತದೆ
ನಾನೊಂದು ಮಗು
ನನ್ನ ಬದುಕು ಭವಿಷ್ಯ ನಿಮ್ಮ ಕೈಯ್ಯಲ್ಲಿದೆ.
ನನ್ನ ಬದುಕು ಭವಿಷ್ಯ ನಿಮ್ಮ ಕೈಯ್ಯಲ್ಲಿದೆ.
ನಾನು ಗೆಲ್ಲುವೆನೆ ಅಥವಾ ಸೋಲುವನೆ ಎಂಬುದನ್ನು
ನಿರ್ಧರಿಸುವವರು ನೀವೇ. ನನ್ನ ಬೆಳವಣಿಗೆಗೆ ಬೇಕಾದ
ಅವಕಾಶಗಳನ್ನು ನೀಡುವಂತೆ ನಿಮ್ಮನ್ನು ಪ್ರಾರ್ಥಿಸುತ್ತೇನೆ.
ಮುಂದೆ ಈ ಪ್ರಪಂಚಕ್ಕೆ ನಾನೊಂದು ವರವಾಗುವಂತೆ
ನನ್ನನ್ನು ಸಜ್ಜುಗೊಳಿಸಲು ನಿಮ್ಮನ್ನು ಬೇಡುತ್ತೇನೆ"

ಮ್ಯಾಮಿ ಜೆನ್ ಕೋಲ್

# ಪರಿವಿಡಿ



678-2

## ಅಧ್ಯಾಯ - I

## ಸಾಮಾನ್ಯ ಮಾರ್ಗದರ್ಶಿ ಸೂಚಿಗಳು

1. ಬಾಲ ಕಾರ್ಮಿಕ ಪದ್ಧತಿಯು ಸಹವರ್ತಿ ವಿಷಯವಾಗಿದ್ದು, ಈ ಬಗ್ಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಜಂಟಿ ಹೊಣೆಗಾರಿಕೆಯನ್ನು ಹೊಂದಿರುತ್ತವೆ. ಆದ್ದರಿಂದ, ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನಾ ಕಾರ್ಯಕ್ರಮವು, ರಾಷ್ಟ್ರೀಯ ಕಾರ್ಯಕ್ರಮವಾಗಿದ್ದು, ಇದಕ್ಕೆ ರಾಜ್ಯ ಸರ್ಕಾರದ ನೆರವು ಅಗತ್ಯವಾಗಿದೆ.

2. ಭಾರತ ಸರ್ಕಾರವು ರಾಷ್ಟ್ರದಾದ್ಯಂತ ಸುಮಾರು 100 ಆಯ್ದ ಜಿಲ್ಲೆಗಳಲ್ಲಿ, "ರಾಷ್ಟ್ರೀಯ ಬಾಲ ಕಾರ್ಮಿಕ ಯೋಜನೆ" (ಎನ್‌ಸಿಎಲ್‌ಪಿ) ಎಂದು ಕರೆಯಲಾಗುವ ಯೋಜನೆಯೊಂದನ್ನು ಅನುಷ್ಠಾನಗೊಳಿಸುತ್ತಿದೆ. ಕರ್ನಾಟಕದಲ್ಲಿ ಎನ್.ಸಿ.ಎಲ್.ಪಿ.ಯನ್ನು ಏಳು ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗಿದೆ. ಅವುಗಳು ಇಂತಿವೆ.

   1. ಧಾರವಾಡ   2. ಹಾವೇರಿ   3. ಗದಗ   4. ಬಿಜಾಪುರ   5. ರಾಯಚೂರು

   6. ಬೆಂಗಳೂರು(ನಗರ) 7. ಬೆಂಗಳೂರು (ಗ್ರಾಮೀಣ)

3. ಕರ್ನಾಟಕ ರಾಜ್ಯದಲ್ಲಿ ಬಾಲ ಕಾರ್ಮಿಕ ಪದ್ಧತಿಯನ್ನು ಪರಿಣಾಮಕಾರಿಯಾಗಿ ನಿರ್ಮೂಲನ ಮಾಡುವ ದೃಷ್ಟಿಯಿಂದ, ಸರ್ಕಾರವು ರಾಜ್ಯದಲ್ಲಿ ಅನುಷ್ಠಾನಕ್ಕೆ ಸಂಬಂಧಿಸಿದಂತೆ, 'ಕ್ರಿಯಾ' ಯೋಜನೆಯನ್ನು ಅನುಮೋದಿಸಿದೆ.

4. ಎನ್.ಸಿ.ಎಲ್.ಪಿ. ಯು 'ಅಪಾಯಕಾರಿ ಕೈಗಾರಿಕೆಗಳು' ಮತ್ತು 'ಕೈಗಾರಿಕಾ ಪ್ರಕ್ರಿಯೆಗಳಲ್ಲಿ' ಕೆಲಸ ಮಾಡುವ ಮಕ್ಕಳನ್ನು ಮಾತ್ರ ಲಕ್ಷ್ಯದಲ್ಲಿಟ್ಟುಕೊಂಡರೆ ರಾಜ್ಯ ಸರ್ಕಾರದ ಕ್ರಿಯಾ ಯೋಜನೆಯು, ಉದ್ಯೋಗದ ಸ್ವರೂಪ ಏನೇ ಇದ್ದಾಗ್ಯೂ ಬಾಲ ಕಾರ್ಮಿಕ ಪದ್ಧತಿಯನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡುವ ಉದ್ದೇಶಗಳನ್ನು ಹೊಂದಿದೆ.

5. ಎನ್.ಸಿ.ಲ್.ಪಿ. ಯು ವಸತಿಯ ಸೌಲಭ್ಯಕ್ಕೆ ಅವಕಾಶ ಕಲ್ಪಿಸುವುದಿಲ್ಲ. ಆದರೆ ಕ್ರಿಯಾ ಯೋಜನೆಯು, ರಕ್ಷಿತ ಮಕ್ಕಳಿಗೆ ಊಟವೂ ಸೇರಿದಂತೆ ವಸತಿಯ ಸೌಲಭ್ಯಕ್ಕೆ ಅವಕಾಶ ಕಲ್ಪಿಸುತ್ತದೆ.

6. ಎನ್.ಸಿ.ಎಲ್.ಪಿ ಯಡಿ ಪ್ರವೇಶ ಪಡೆದ ಮಕ್ಕಳಿಗೂ ಮತ್ತು ಕ್ರಿಯಾ ಯೋಜನೆಯಡಿ ಔಪಚಾರಿಕ ಶಾಲೆಗಳಲ್ಲಿ ಪ್ರವೇಶ ಪಡೆದ ಮಕ್ಕಳಿಗೂ ಸಹ ರಾಜ್ಯ ಸರ್ಕಾರದ ವೆಚ್ಚದಲ್ಲಿ ವಸತಿ ಸೌಲಭ್ಯ ದೊರೆಯುತ್ತದೆ.

7. ಎನ್.ಸಿ.ಎಲ್.ಪಿ, ಶಾಲೆಗಳನ್ನು ನಡೆಸಲು ಸ್ಥಾಪಿತವಾದ ಸಂಘಗಳು ಎನ್.ಸಿ.ಎಲ್.ಪಿ. ಜಿಲ್ಲೆಗಳಲ್ಲಿ ಕ್ರಿಯಾ ಯೋಜನೆಯ ಅನುಷ್ಠಾನ ಕೆಲಸವನ್ನು ಸಹ ನಿರ್ವಹಿಸುತ್ತವೆ ಮತ್ತು ಕ್ರಿಯಾ ಯೋಜನೆಯನ್ನು ಅನುಷ್ಠಾನಗೊಳಿಸುವುದಕ್ಕೆ ಎನ್.ಸಿ.ಎಲ್.ಪಿ. ರಹಿತ ಜಿಲ್ಲೆಗಳಲ್ಲಿ ಹೊಸ ಸಂಘಗಳನ್ನು ಸ್ಥಾಪಿಸಲಾಗುವುದು.

8. ಅಪಾಯಕಾರಿ ಕೈಗಾರಿಕೆಗಳು ಮತ್ತು ಕೈಗಾರಿಕಾ ಪ್ರಕ್ರಿಯೆಗಳಲ್ಲಿ ಕೆಲಸ ಮಾಡುವ ಮಕ್ಕಳ ಗುರುತಿಸುವಿಕೆ, ಬಿಡುಗಡೆ ಮತ್ತು ಪುನರ್ವಸತಿ ಕುರಿತು ವ್ಯವಹರಿಸುವುದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರ, ಭಾರತ ಸರ್ಕಾರ, ನ್ಯಾಯಾಲಯಗಳು ಮತ್ತು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಕಾಲಕಾಲಕ್ಕೆ ಹೊರಡಿಸುವ ಮಾರ್ಗದರ್ಶಿ ಸೂತ್ರಗಳು ಮತ್ತು ನಿರ್ದೇಶನಗಳನ್ನು ಪಾಲಿಸಲು ಎಚ್ಚರವಹಿಸತಕ್ಕದ್ದು. ಈ ದಿಶೆಯಲ್ಲಿ ಯಾವುದೇ ಮಾರ್ಗಾಂತರಕ್ಕೆ ಅವಕಾಶವಿರಕೂಡದು.

9. ಎನ್.ಸಿ.ಎಲ್.ಪಿ. ಜಿಲ್ಲೆಗಳಲ್ಲಿ ಸಹ ಅನುಮತಿಸಲಾದ ಬಾಬುಗಳಿಗೆ ಸಂಬಂಧಿಸಿದಂತೆ ಎನ್.ಸಿ.ಎಲ್.ಪಿ. ನಿಧಿಗಳನ್ನು ಬಳಸಿಕೊಳ್ಳುವಾಗ ಕ್ರಿಯಾ ಯೋಜನೆಯಲ್ಲಿ ಅವಕಾಶ ಕಲ್ಪಿಸಲಾದಂತಹ ಉಳಿದ ಅಂಶಗಳಿಗೂ ಹಣ

10. ಕರ್ನಾಟಕ ರಾಜ್ಯದಲ್ಲಿ ರಕ್ಷಿಸಲಾದಂಥ ಕೆಲಸ ಮಾಡುವ ಮಕ್ಕಳ ಯುಕ್ತ ಪುನರ್ವಸತಿಯ ಪರಿಣಾಮಕ್ಕೆ ಸಂಬಂಧಪಟ್ಟಂತೆ ಎನ್.ಸಿ.ಎಲ್.ಪಿ. ಮತ್ತು ಕ್ರಿಯಾ ಯೋಜನೆ ಕಾರ್ಯಕ್ರಮಗಳ ಸೂಕ್ತ ವಿಲೀನ ಮತ್ತು ಸಂಯೋಜನೆಯಾಗತಕ್ಕದ್ದು.

11. ಎ) ಅಪಾಯಕಾರಿ ಉದ್ಯೋಗಳಲ್ಲಿ ಕೆಲಸ ಮಾಡುವ ಮಕ್ಕಳು

ಬಿ) ವೇಶ್ಯಾವಾಟಿಕೆಗಳಿಗೆ ತಳ್ಳಲ್ಪಟ್ಟ ಹೆಣ್ಣು ಮಕ್ಕಳು

ಸಿ) ಪ.ಜಾ: ಪರಿ.ಪಂ:ಹಿಂದುಳಿದ ವರ್ಗ: ಅಲ್ಪಸಂಖ್ಯಾತ ವರ್ಗಗಳಿಗೆ ಸೇರಿದ ಕೆಲಸ ಮಾಡುವ ಮಕ್ಕಳು

ಡಿ) ಸಮಾಜದ ದುರ್ಬಲ ವರ್ಗಗಳಿಂದ ಬಂದಂತಹ ಮಕ್ಕಳು. ಇವರನ್ನು ಗುರುತಿಸಿ, ರಕ್ಷಿಸುವುದಕ್ಕೆ ಆದ್ಯತೆಯನ್ನು ನೀಡಬೇಕು.

12. ರಕ್ಷಿಸಲಾದ ಮಕ್ಕಳಿಗೆ ವಸತಿ ಶಾಲೆಗಳಲ್ಲಿ ಪುನರ್ವಸತಿಯನ್ನು ಕಲ್ಪಿಸುವಾಗ, ಅವರು ತಮ್ಮ ಹತ್ತಿರದ ಕುಟುಂಬದೊಂದಿಗೆ ಮತ್ತು ಸಂಪೂರ್ಣವಾಗಿ ಸಮುದಾಯದೊಂದಿಗೆ ಸಂಪರ್ಕವನ್ನು ಇಟ್ಟುಕೊಳ್ಳುವಂತೆ ಪ್ರತಿಯೊಂದು ಯತ್ನವನ್ನು ಮಾಡಬೇಕು. ತನ್ಮೂಲಕ ರಕ್ಷಿಸಲಾದ ಮಕ್ಕಳಿಗೆ ಪ್ರತ್ಯೇಕತೆಯ ಭಾವನೆ ಬರದಂತಹ ಮತ್ತು ಮುಖ್ಯವಾಹಿನಿಯಲ್ಲಿ ಸಮ್ಮಿಳಿತವಾಗುವಂತಹ ಸಹಜ ಹಾಗೂ ಸುಲಭವಾಗುವಂತಹ ವಾತಾವರಣವನ್ನು ಸೃಜಿಸಬೇಕು.

13. ಕ್ರಿಯಾ ಯೋಜನೆಗೆ ಮುಖ್ಯವಾಹಿನಿ ಶಾಲೆಗಳೊಂದಿಗೆ ನಿಕಟವಾದ ಸಂಪರ್ಕವಿರತಕ್ಕದ್ದು. ಇದರಿಂದ ಸಾಮಾಜಿಕ ಪ್ರತ್ಯೇಕತೆಯು ನಿರಂತರವಾಗಿರದಂತಾಗಲು ಸಾಧ್ಯವಾಗುತ್ತದೆ. ಈ ಕಾರ್ಯಕ್ರಮವನ್ನು ಸಾಧ್ಯವಿರುವಲ್ಲೆಲ್ಲ ಪುನರ್ವಸತಿ ಅವಧಿಯಲ್ಲಿ ಮತ್ತು ಹದಿಹರೆಯದವರು ಪುನರ್ವಸತಿ ಕೇಂದ್ರಗಳನ್ನು ಬಿಟ್ಟು ಹೋಗುವ ಸಂದರ್ಭದಲ್ಲಿ ಅವರನ್ನು ಸೇರ್ಪಡೆ ಮಾಡಿಕೊಳ್ಳುವ ಮೂಲಕ ಸಹ ಸಾಧಿಸಬಹುದಾಗಿದೆ.

14. ಆರೋಗ್ಯ ಮತ್ತು ಮನಸ್ಸಿನ ಮೇಲೆ ಪ್ರತಿಕೂಲ ಪರಿಣಾಮಬೀರುವ ವೃತ್ತಿಗಳಲ್ಲಿ ಕೆಲಸ ಮಾಡುವ ಎಲ್ಲಾ ಮಕ್ಕಳನ್ನು, ಬಾಲ ಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮ, 1986ರ ಅನುಸೂಚಿಯಡಿ ಕಾರ್ಯಚಟುವಟಿಕೆಗಳನ್ನು ಪಟ್ಟಿ ಮಾಡಿರಲಿ ಅಥವಾ ಮಾಡದಿರಲಿ ಅದನ್ನು ಗಣನೆಗೆ ತೆಗೆದುಕೊಳ್ಳದೆ ಪುನರ್ವಸತಿ ಕಲ್ಪಿಸುವುದಕ್ಕೆ ಪರಿಗಣಿಸತಕ್ಕದ್ದು.

15. 6 ರಿಂದ 14 ವರ್ಷ ವಯಸ್ಸಿನ ಮಕ್ಕಳನ್ನು ಶಾಲೆಗೆ ದಾಖಲು ಮಾಡಲು ಗಮನವನ್ನು ನೀಡತಕ್ಕದ್ದು ಮತ್ತು ಕೆಲಸ ಮಾಡುವ ಸಣ್ಣ ವಯಸ್ಸಿನ ಮಕ್ಕಳನ್ನು ಔಪಚಾರಿಕ ಶಾಲಾ ವ್ಯವಸ್ಥೆಗೆ ಸೇರಿಸುವುದಕ್ಕೆ ಪ್ರಚೋದನೆಯನ್ನು ನೀಡತಕ್ಕದ್ದು.

## ಅಧ್ಯಾಯ - II

**ಕ್ರಿಯಾ ಯೋಜನೆಯಡಿ ಪ್ರಮುಖ ಕಾರ್ಯಚಟುವಟಿಕೆಗಳು**

1. ಅಪಾಯಕಾರಿ ಮತ್ತು ಅಪಾಯಕಾರಿಯಲ್ಲದ ಕಾರ್ಯಚಟುವಟಿಕೆಗಳಲ್ಲಿ ತೊಡಗಿರುವ 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ಬಾಲ ಕಾರ್ಮಿಕರನ್ನು ಸಮೀಕ್ಷೆಯ ಮೂಲಕ ಗುರುತಿಸುವುದು, ಅವುಗಳಿಂದ ಬಿಡುಗಡೆಗೊಳಿಸುವುದು ಮತ್ತು ಅವರಿಗೆ ಪುನರ್ವಸತಿ ಕಲ್ಪಿಸುವುದು ಕ್ರಿಯಾ ಯೋಜನೆಯ ಪ್ರಮುಖ ಕಾರ್ಯಚಟುವಟಿಕೆಗಳಾಗಿವೆ.

2. ಬಿಡುಗಡೆಗೊಳಿಸಲಾದ ಬಾಲಕಾರ್ಮಿಕರಿಗೆ ಪುನರ್ವಸತಿ ಕಲ್ಪಿಸುವುದು, ಎನ್‌ಸಿಎಲ್‌ಪಿ ರಹಿತ ಜಿಲ್ಲೆಗಳಲ್ಲಿ ಪುರ್ನವಸತಿ ಕೇಂದ್ರಗಳು ಮತ್ತು ವಿಶೇಷ ವಸತಿ ಶಾಲೆಗಳನ್ನು ತೆರೆಯುವುದು ಮತ್ತು ಎನ್‌ಸಿಎಲ್‌ಪಿ ಯಡಿ ಅಸ್ತಿತ್ವದಲ್ಲಿ ಇರುವ ವಿಶೇಷ ಶಾಲೆಗಳನ್ನು ಸಹ ರಾಜ್ಯ ಸರ್ಕಾರದಿಂದ ಹೆಚ್ಚುವರಿ ನಿಧಿಗಳನ್ನು ಒದಗಿಸುವ ಮೂಲಕ ವಿಶೇಷ ವಸತಿ ಶಾಲೆಗಳಾಗಿ ಪರಿವರ್ತಿಸುವುದು.

3. ಪ್ರಕ್ರಿಯೆಯನ್ನು ಈ ಮುಂದಿನ ಕಾರ್ಯಗಳೊಂದಿಗೆ ಪ್ರಾರಂಭಿಸಲಾಗುವುದು.

ಎ) ವ್ಯವಸ್ಥಿತ ಸಮೀಕ್ಷೆ ಮೂಲಕ ಬಾಲ ಕಾರ್ಮಿಕರನ್ನು ಗುರುತಿಸುವುದು.

ಬಿ) ನಿಯೋಜಕನಿಗೆ ನೋಟೀಸನ್ನು ನೀಡುವುದು (ಅಪಾಯಕಾರಿ ಉದ್ಯಮಗಳ ಪ್ರಕರಣಗಳಲ್ಲಿ);

ಸಿ) ನಿಯೋಜಕನ ವಿರುದ್ಧ ಕಾನೂನು ಕ್ರಮ ಜರುಗಿಸುವುದು (ಅಪಾಯಕಾರಿ ಉದ್ಯಮಗಳ ಪ್ರಕರಣಗಳಲ್ಲಿ);

ಡಿ) ಜಾರಿ ವ್ಯವಸ್ಥೆಯನ್ನು ಬಲಪಡಿಸುವ ಮೂಲಕ ಗುರುತಿಸಲಾದ ಬಾಲ ಕಾರ್ಮಿಕರನ್ನು ಬಿಡುಗಡೆಗೊಳಿಸುವುದು;

ಇ) ಬಾಲ ಕಾರ್ಮಿಕ ಪದ್ಧತಿಯಿಂದ ವಿಮುಕ್ತರಾದ ಮಕ್ಕಳಿಗೆ ಪುನರ್ವಸತಿ ಕಲ್ಪಿಸುವುದು;

ಎಫ್) ನೆರವಿನ ಅಗತ್ಯವಿರುವ ಪಾಲಕರಿಗೆ ನೆರವು ನೀಡುವುದು;

ಜಿ) ಅತ್ಯಧಿಕ ಪ್ರಮಾಣದ ಜಾಗೃತಿ ಕಾರ್ಯಕ್ರಮಗಳನ್ನು ಆರಂಭಿಸುವುದು;

ಹೆಚ್) ಕ್ರಿಯಾ ಯೋಜನೆಯ ಅನುಷ್ಠಾನ ಕಾರ್ಯದಲ್ಲಿ ತೊಡಗಿರುವ ಸಿಬ್ಬಂದಿಗೆ ತರಬೇತಿ;

ಐ) ಸರ್ಕಾರದ ಅನುಮತಿಯೊಂದಿಗೆ ಸಾರ್ವಜನಿಕರು, ಕಾರ್ಪೋರೇಟ್ ಸಂಸ್ಥೆಗಳು, ಧರ್ಮಾ ನ್ಯಾಸಗಳು ಇತ್ಯಾಗಳಿಂದ ಅವಶ್ಯಕವಾದ ನಿಧಿಗಳನ್ನು ಸಂಗ್ರಹಿಸುವುದು;

ಜೆ) ಕಾಲಕಾಲಕ್ಕೆ ಯೋಜನೆಯ ಅನುಷ್ಠಾನದ ಪ್ರಗತಿ ಪುನರವಲೋಕನ, ಮೇಲ್ವಿಚಾರಣೆ ಮಾಡುವುದು ಮತ್ತು ಆ ಕುರಿತು ವರದಿ ಸಲ್ಲಿಸುವುದು;

ಕೆ) ಬಾಲ ಕಾರ್ಮಿಕ ಪದ್ಧತಿಯ ಅಸ್ತಿತ್ವಕ್ಕೆ ಬಡತನ ಮತ್ತು ಅನಕ್ಷರತೆ ವಿವಾದಾತೀತ ಪ್ರಮುಖ ಕಾರಣವಾಗಿರುವುದರಿಂದ, ನೆರವಿನ ಅಗತ್ಯತೆ ಇರುವ ಬಾಲಕಾರ್ಮಿಕ ಕುಟುಂಬಗಳ ಮೇಲೆ ಹೆಚ್ಚಿನ ಗಮನ

ನೀಡುವುದು ಸಹ ಅಗತ್ಯವಾಗಿದೆ. ಆದ್ದರಿಂದ, ಕೆಲಸದಲ್ಲಿ ತೊಡಗಿರುವ ಮಕ್ಕಳ ಅಗತ್ಯತೆ ಇರುವ ಕುಟುಂಬಗಳಿಗೆ, ಸರ್ಕಾರದ ಎಲ್ಲ ಇಲಾಖೆಗಳು, ಸ್ಥಳೀಯ ಸಂಸ್ಥೆಗಳು ಮತ್ತು ಸರ್ಕಾರೇತರ ಸಂಸ್ಥೆಗಳು ಒಳಗೊಂಡಂತೆ, ಸರ್ಕಾರದ ಬಡತನ ನಿರ್ಮೂಲನ ಕಾರ್ಯಕ್ರಮಗಳನ್ನು ಬಳಸಿಕೊಳ್ಳುವ ಮೂಲಕ ನೆರವು ನೀಡುವುದು.

ಎಲ್) ಶಾಲೆಗಳಿಗೆ ಮಕ್ಕಳನ್ನು ಸಾಮೂಹಿಕವಾಗಿ ದಾಖಲು ಮಾಡಿಕೊಳ್ಳುವ ಮೂಲಕ, ಮಕ್ಕಳು ಹೊಸದಾಗಿ ಕೆಲಸಕ್ಕೆ ಸೇರುವುದನ್ನು ತಡೆಗಟ್ಟುವುದು. ಈ ಉದ್ದೇಶಕ್ಕಾಗಿ, ಸರ್ಕಾರದ ಡಿಪಿಇಪಿ ಕಾರ್ಯಕ್ರಮಗಳನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳುವುದು ಅಗತ್ಯವಾಗಿದೆ.

## ಅಧ್ಯಾಯ - III

**ಸಾಂಸ್ಥಿಕ ವ್ಯವಸ್ಥೆಗಳು:**

1. ಕ್ರಿಯಾ ಯೋಜನೆಯಲ್ಲಿ ಹೇಳಲಾದಂತೆ, ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಉನ್ನತಾಧಿಕಾರಿ ಸಮಿತಿಯನ್ನು ಸರ್ಕಾರಿ ಆದೇಶ ಸಂಖ್ಯೆ: ಎಲ್‌ಡಿ 54 ಸಿಎಲ್‌ಸಿ 2000 II ದಿನಾಂಕ: 29-5-2001ರ ಮೇರೆಗೆ ರಚಿಸಲಾಗಿದೆ. ಅದರ ಪ್ರತಿಯನ್ನು ಈ ಮಾರ್ಗದರ್ಶಿ ಸೂತ್ರಗಳಿಗೆ ಅನುಬಂಧ - ಎ1 ಎಂದು ಲಗತ್ತಿಸಲಾಗಿದೆ. ಈ ಸಮಿತಿಯು ನಿಯತಕಾಲಿಕವಾಗಿ ಪ್ರಗತಿಯ ಪುನರವಲೋಕನ ಮತ್ತು ಮೇಲ್ವಿಚಾರಣೆ ನಡೆಸುತ್ತದೆ. ಮತ್ತು ಕಾಲಕಾಲಕ್ಕೆ ಕಾರ್ಯನೀತಿ ನಿರ್ದೇಶನವನ್ನು ಸಹ ನಿರ್ಧರಿಸುತ್ತದೆ.

2. ಕ್ರಿಯಾ ಯೋಜನೆಯಲ್ಲಿ ಹೇಳಲಾದಂತೆ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಸಮನ್ವಯ ಸಮಿತಿಯನ್ನು ಸಹ ಕ್ರಿಯಾ ಯೋಜನೆಯ ಪರಿಣಾಮಕಾರಿ ಅನುಷ್ಠಾನ, ಸಮನ್ವಯ, ಪುನರವಲೋಕನ ಮತ್ತು ಅನುಷ್ಠಾನದ ಮೇಲ್ವಿಚಾರಣೆಗಾಗಿ ಸರ್ಕಾರಿ ಆದೇಶ ಸಂಖ್ಯೆ. ಎಲ್‌ಡಿ 54 ಸಿಎಲ್‌ಸಿ 2000 III , ದಿನಾಂಕ: 29-5-2000ರ ಮೇರೆಗೆ ರಚಿಸಲಾಗಿದೆ. ಅದರ ಪ್ರತಿಯನ್ನು ಈ ಮಾರ್ಗದರ್ಶಿ ಸೂತ್ರಗಳಿಗೆ ಅನುಬಂಧ - ಎ2 ಎಂದು ಲಗತ್ತಿಸಲಾಗಿದೆ. ಕರ್ನಾಟಕ ಸರ್ಕಾರದ ಕಾರ್ಮಿಕ ಇಲಾಖೆಯು, ಕ್ರಿಯಾ ಯೋಜನೆಯ ಅನುಷ್ಠಾನಕ್ಕೆ ಸಂಬಂಧಪಟ್ಟಂತೆ ನೋಡೆಲ್ ಇಲಾಖೆಯಾಗಿರತಕ್ಕದ್ದು.

3. ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಯೋಜನಾ ಸಂಘಗಳನ್ನು ರಚಿಸಲಾಗಿದೆ. ಇಡೀ ಕ್ರಿಯಾ ಯೋಜನೆಯನ್ನು ಈ ಸಂಘಗಳ ಮೂಲಕವೇ ಅನುಷ್ಠಾನಗೊಳಸಲಾಗುವುದು.

4. ಜಿಲ್ಲಾ ಯೋಜನಾ ಸಂಘಗಳ ಈಗಾಗಲೇ ಅನೇಕ ಜಿಲ್ಲೆಗಳಲ್ಲಿ ಅಸ್ತಿತ್ವದಲ್ಲಿವೆ. ಆದರೆ ಅಂಥ ಸಂಘಗಳು ನೋಂದಣಿಯಾಗಿರದಿರುವಲ್ಲಿ ಜಿಲ್ಲೆಗಳ ಜಿಲ್ಲಾಧಿಕಾರಿಗಳು ಅವುಗಳನ್ನು ನೋಂದಣಿ ಮಾಡಿಸುವುದಕ್ಕೆ ತಕ್ಷಣ ಅಗತ್ಯ ವ್ಯವಸ್ಥೆಗಳನ್ನು ಮಾಡತಕ್ಕದ್ದು.

5. ಜಿಲ್ಲಾ ಯೋಜನಾ ಸಂಘಗಳು, ಕ್ರಿಯಾ ಯೋಜನೆಯ ಅನುಷ್ಠಾನಕ್ಕೆ ಸಂಬಂಧಪಟ್ಟಂತೆ ಸಂಪೂರ್ಣ ಹೊಣೆಯಾಗಿರುತ್ತವೆ.

6. ಜಿಲ್ಲಾ ಯೋಜನಾ ಸಂಘಗಳು, ಎಲ್ಲಾ ಹಿತಾಸಕ್ತಿದಾರರ ಸಹಕಾರವನ್ನು ಪಡೆಯುವಂತೆ ಮತ್ತು ಗುರಿ ಸಾಧಿಸಲು ಅವರ ಪ್ರಯತ್ನಗಳನ್ನು ಏಕವಾಹಿನಿಯಾಗಿ ಒಮ್ಮುಖಗೊಳಿಸುವಂತೆ ನಿರ್ದೇಶಿಸಲಾಗಿದೆ.

7. ಜಿಲ್ಲಾ ಯೋಜನಾ ಸಂಘಗಳಿಗೆ ಸಲಹೆ ನೀಡಲು ಸರ್ಕಾರಿ ಆದೇಶ ಸಂಖ್ಯೆ ಎಲ್‌ಡಿ 54 ಸಿಎಲ್‌ಸಿ 2000 IV, ದಿನಾಂಕ 29-5-2001ರ ಮೇರೆಗೆ ಒಂದು ಹೊಸ ಜಿಲ್ಲಾ ಸಲಹಾ ಸಮಿತಿಯನ್ನು ರಚಿಸಲಾಗಿದೆ. ಅದರ ಪ್ರತಿಯನ್ನು ಅನುಬಂಧ ಎ3 ಎಂದು ಲಗತ್ತಿಸಲಾಗಿದೆ. ಈ ಸಮಿತಿಯು, ಕ್ರಿಯಾ ಯೋಜನೆ ಮತ್ತು ಭಾರತ ಸರ್ಕಾರದ ಎನ್.ಸಿ.ಎಲ್.ಪಿ. ಯನ್ನು ಅನುಷ್ಠಾನಗೊಳಿಸುವಲ್ಲಿ ಸಂಘಕ್ಕೆ ಸಲಹೆ ನೀಡತಕ್ಕದ್ದು.

8. ಕ್ರಿಯಾ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ದೃಷ್ಟಿಯಿಂದ ಕ್ರಿಯಾ ಯೋಜನೆಯ ದೈನಂದಿನ ಆಡಳಿತ ಮತ್ತು ಕ್ರಿಯಾ ಯೋಜನೆಯ ಅನುಷ್ಠಾನವನ್ನು ನೋಡಿಕೊಳ್ಳುವುದಕ್ಕೆ ಸರ್ಕಾರಿ ಆದೇಶ ಸಂಖ್ಯೆ ಎಲ್‌ಡಿ 54 ಸಿಎಲ್‌ಸಿ 2000 (V) ದಿನಾಂಕ: 29-5-2001ರ ಮೇರೆಗೆ ಜಿಲ್ಲಾ ಕಾರ್ಯಕಾರಿ ಸಮಿತಿಯನ್ನು ರಚಿಸಲಾಗಿದೆ. ಅದರ ಪ್ರತಿಯನ್ನು ಅನುಬಂಧ - ಎ4 ಎಂದು ಲಗತ್ತಿಸಲಾಗಿದೆ.

9. ಕಾರ್ಯಕಾರಿ ಸಮಿತಿಯು, ಸಮೀಕ್ಷೆ ನಡೆಸುವುದು, ಗುರುತಿಸುವಿಕೆ, ಬಿಡುಗಡೆ, ಪುನರ್ವಸತಿ ಕಲ್ಪಿಸುವುದು, ಸಿಬ್ಬಂದಿಯ ತರಬೇತಿ, ಮೇಲ್ವಿಚಾರಣೆ, ವರದಿ ಸಲ್ಲಿಸುವುದು, ಒಮ್ಮುಖಗೊಳಿಸುವುದು ಮತ್ತು ಫಲಿತಾಂಶ ಸಾಧಿಸುವುದೂ ಸೇರಿದಂತೆ ಕ್ರಿಯಾ ಯೋಜನೆಯ ನಿರ್ವಹಣೆಗೆ ಹೊಣೆಯಾಗಿರುತ್ತದೆ.

10. ಜಿಲ್ಲಾ ಮಟ್ಟದಲ್ಲಿ, ಕಾರ್ಯಕಾರಿ ಸಮಿತಿಯು, ಕ್ರಿಯಾ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದ ಅಂಶಗಳ ಬಗ್ಗೆ ಸಂಘಕ್ಕೆ ನಿಯತವಾಗಿ ವರದಿ ಮಾಡಲು ವೇಗವರ್ಧಕ ಏಜೆಂಟನಂತೆ ಕಾರ್ಯನಿರ್ವಹಿಸುವುದಕ್ಕೆ ಆಡಳಿತಾತ್ಮಕ ಪ್ರಾಧಿಕಾರಿಯನ್ನು ನೇಮಿಸಬಹುದು.

11. ತಾಲ್ಲೂಕು ಮತ್ತು ಗ್ರಾಮ ಮಟ್ಟಗಳಲ್ಲಿ ಸಹ, ಕ್ರಿಯಾ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ವರದಿ ನೀಡುವುದಕ್ಕೆ ಅದೇ ಬಗೆಯ ವೇಗವರ್ಧಕ ಏಜೆಂಟನನ್ನು ನೇಮಿಸಲಾಗುವುದು.

12. ತಾಲ್ಲೂಕು ಮತ್ತು ಗ್ರಾಮ ಮಟ್ಟದ ವೇಗವರ್ಧಕ ಏಜೆಂಟರು ನಿಯತಕಾಲಿಕ ವರದಿಗಳನ್ನು ಜಿಲ್ಲಾ ವೇಗವರ್ಧಕ ಏಜೆಂಟರಿಗೆ ನೇರವಾಗಿ ಕಳುಹಿಸಬಹುದು ಮತ್ತು ಜಿಲ್ಲಾ ವೇಗವರ್ಧಕ ಏಜೆಂಟರು ಪ್ರತಿಯಾಗಿ ಕಾಲಕಾಲಕ್ಕೆ ಜಿಲ್ಲಾಧಿಕಾರಿಗಳಿಗೆ ಮಾಹಿತಿಯನ್ನು ಕೊಡಬೇಕು ಮತ್ತು ಸಂಘ ಹಾಗೂ ಸಲಹಾ ಸಮಿತಿಗೆ ವರದಿಗಳನ್ನು ಸಲ್ಲಿಸಬೇಕು.

## ಅಧ್ಯಾಯ IV

**ಸಮೀಕ್ಷೆ:**

1. ಸಮೀಕ್ಷೆಯು, ರಾಜ್ಯ ಬಾಲ ಕಾರ್ಮಿಕ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಅಗತ್ಯವಾದ ಆರಂಭಿಕ ಅಂಶವಾಗಿದೆ. ಸಮೀಕ್ಷೆಯು, ಪ್ರತಿ ಜಿಲ್ಲೆಯಲ್ಲಿನ ಬಾಲ ಕಾರ್ಮಿಕರ ಪ್ರಮಾಣ, ಕೆಲಸ ಮಾಡುವ ಮಕ್ಕಳ ಆರೋಗ್ಯದ ಸ್ಥಿತಿ, ಕೈಗಾರಿಕೆಗಳ ಸ್ವರೂಪ ಮತ್ತು ಮಕ್ಕಳನ್ನು ನಿಯೋಜಿಸಲಾಗಿರುವ ವೃತ್ತಿ ಹಾಗೂ ಕೆಲಸ ಮಾಡುವ ಮಕ್ಕಳ ಮತ್ತು ಅವರ ತಂದೆತಾಯಿಗಳ ಆರ್ಥಿಕ ಪರಿಸ್ಥಿತಿ ಮುಂತಾದವುಗಳ ಬಗ್ಗೆ ನಮಗೆ ಮಾಹಿತಿಯನ್ನು ಒದಗಿಸುತ್ತದೆ. ಈ ಹಿಂದೆಯೇ ಸಮೀಕ್ಷೆಗಳನ್ನು ನಡೆಸಿದ್ದರೂ, ಇತ್ತೀಚಿನ ಸ್ಥಿತಿಗಳನ್ನು ತಿಳಿದುಕೊಳ್ಳುವುದಕ್ಕೆ ಹೊಸ ಸಮೀಕ್ಷೆ ನಡೆಸುವುದು ಅಗತ್ಯವಾಗಿದೆ.

2. ಜನವರಿ: ಫೆಬ್ರವರಿ 2001ರಲ್ಲಿ ಶಿಕ್ಷಣ ಇಲಾಖೆಯು "ಶಾಲೆಯಿಂದ ಹೊರಗುಳಿದ ಮಕ್ಕಳ" ಮೂಲ ಸಮೀಕ್ಷೆಯನ್ನು ನಡೆಸಿತು. ಮತ್ತು ಆ ಬಗ್ಗೆ ವರದಿಗಳು ಶಿಕ್ಷಣ ಇಲಾಖೆಯಲ್ಲಿ ದೊರೆಯುತ್ತವೆ. ಈ ಮೂಲ ಸಮೀಕ್ಷೆಯನ್ನು ಹೊಸ ಸಮೀಕ್ಷೆಗೆ ಪ್ರಾರಂಭಿಕ ಅಂಶವಾಗಿ ಉಪಯೋಗಿಸಿಕೊಳ್ಳಬಹುದಾಗಿದೆ. ಆದರೆ, ಹೊಸ ಸಮೀಕ್ಷೆಯು, ಕೆಲಸ ಮಾಡುವ ಮಕ್ಕಳಿಗೆ ಮಾತ್ರ ಸಿಮೀತವಾಗಿರಬೇಕು, ಅಂದರೆ, ಆ ಮಕ್ಕಳು ಅಪಾಯಕಾರಿ ಉದ್ಯೋಗಗಳಲ್ಲಿ ಕೆಲಸ ಮಾಡುತ್ತಿರಲಿ ಅಥವಾ ಅಪಾಯಕಾರಿಯಲ್ಲದ ಉದ್ಯೋಗಗಳಲ್ಲಿ ಕೆಲಸ ಮಾಡುತ್ತಿರಲಿ ಅದಾವುದನ್ನು ಲಕ್ಷಿಸಕೂಡದು.

3. ಅಪಾಯಕಾರಿ ಮತ್ತು ಅಪಾಯಕಾರಿಯಲ್ಲದ ಉದ್ಯೋಗಗಳಲ್ಲಿ ಕೆಲಸ ಮಾಡುವ ಮಕ್ಕಳ ಸಮೀಕ್ಷೆ ಮಾಡಲು ಪ್ರತ್ಯೇಕ ನಮೂನೆಗಳನ್ನು ಬಳಸುವುದಕ್ಕೆ ಗಮನ ನೀಡತಕ್ಕದ್ದು, ಸಮೀಕ್ಷೆ ಮೂಲಕ ಮಾಹಿತಿ ಸಂಗ್ರಹಣೆಗಾಗಿ ಬಳಸುವ ಪ್ರತ್ಯೇಕ ನಮೂನೆಗಳನ್ನು ಅನುಬಂಧ - 'ಬಿ1' 'ಬಿ2' ರಲ್ಲಿ ಕೊಡಲಾಗಿದೆ.

4. ಸಮೀಕ್ಷೆಯನ್ನು ನಡೆಸುವುದಕ್ಕೆ ಮೊದಲು ಮಕ್ಕಳನ್ನು ಉದ್ಯೋಗದಲ್ಲಿ ತೊಡಗಿಸಲಾಗಿರುವ ಸಂಭವನೀಯ ಪ್ರದೇಶಗಳನ್ನು ಗುರುತಿಸುವುದು ಅಗತ್ಯವಾಗಿದೆ. ಅಂಥ ಪ್ರದೇಶಗಳು ಕಾರ್ಖಾನೆಗಳು, ಗಣಿಗಳು, ಹೋಟೆಲ್‌ಗಳು, ಕಾರ್ಯಸಂಸ್ಥೆಗಳು, ಅಂಗಡಿಗಳು, ಗ್ಯಾರೇಜ್ ಇತ್ಯಾದಿಗಳಾಗಿರಬಹುದು.

5. ಬಾಲ ಕಾರ್ಮಿಕರಿರುವ ಮೂಲಗಳನ್ನು ಕಂಡುಕೊಳ್ಳಲು, ಗ್ರಾಮ ಪಂಚಾಯಿತಿಗಳು, ಪುರಸಭೆಗಳು ಮತ್ತು ಔದ್ಯಮಿಕ ಸಂಸ್ಥೆಗಳು. ಹಾಗೂ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಲಿ (ಕೆಐಎಡಿಬಿ), ಕರ್ನಾಟಕ ರಾಜ್ಯ ಕೈಗಾರಿಕಾ ಹೂಡಿಕೆ ಅಭಿವೃದ್ಧಿ ನಿಗಮ (ಕೆಎಸ್ಐಐಡಿಸಿ), ಗ್ರೇಟರ್ ಮೈಸೂರ್ ಚೇಂಬರ್ಸ್ ಆಫ್ ಕಾರ್ಮರ್ಸ್ (ಜಿಎಂಸಿಸಿ) ಕರ್ನಾಟಕ ರಾಜ್ಯ ಹಣಕಾಸು ನಿಗಮ (ಕೆಎಸ್‌ಎಫ್‌ಸಿ), ಕರ್ನಾಟಕ ಸಣ್ಣ ಪ್ರಮಾಣದ ಕೈಗಾರಿಕೆಗಳ ಸಂಸ್ಥೆ (ಕೆಎಎಸ್‌ಎಸ್‌ಐಎ) ಇವುಗಳ ಸೇವೆಗಳನ್ನು ಬಳಸಿಕೊಳ್ಳಬಹುದು. ಸಂಭವನೀಯ ಪ್ರದೇಶಗಳನ್ನು ಗ್ರಾಮವಾರು, ಹೋಬಳಿವಾರು, ತಾಲ್ಲೂಕುವಾರು. ಜಿಲ್ಲಾವಾರಾಗಿ ಮಾಡಬಹುದು. ಕೆಲಸ ಮಾಡುವ ಮಕ್ಕಳ ಸಂಭವನೀಯ ಪ್ರದೇಶಗಳ ಈ ಪಟ್ಟಿಯು ಸಮೀಕ್ಷೆದಾರರ ತಂಡಕ್ಕೆ ದೊರೆಯುವಂತೆ ಮಾಡತಕ್ಕದ್ದು. ಈ ಪಟ್ಟಿಗನ್ನು ಸಮೀಕ್ಷೆದಾರರು ಮಾರ್ಗದರ್ಶಿ ಪುಸ್ತಕವಾಗಿ ಬಳಸಬಹುದು.

6. ಆದರೆ, ಸಮೀಕ್ಷಾ ತಂಡವು, ಸಮೀಕ್ಷೆಯ ಅವಧಿಯಲ್ಲಿ ಅವರ ಗಮನಕ್ಕೆ ಬರಬಹುದಾದಂತಹ ಕಾರ್ಯಸಂಸ್ಥೆಗಳನ್ನು ಅಂಥ ಕಾರ್ಯ ಸಂಸ್ಥೆಗಳು ಸಂಭಾವ್ಯ ಪ್ರದೇಶಗಳ ಪಟ್ಟಿಯಲ್ಲಿ ಸೇರಿರದಿದ್ದಾಗ್ಯೂ ಸಮೀಕ್ಷಾ ವ್ಯಾಪ್ತಿಗೆ ಒಳಪಡಿಸತಕ್ಕದ್ದು.

7. ಗ್ರಾಮದ ಅಧಿಕಾರಿಗಳು ಮತ್ತು ಸರ್ಕಾರೇತರ ಸಂಸ್ಥೆಗಳೂ ಸಹ ಬಾಲ ಕಾರ್ಮಿಕರನ್ನು ಗುರುತಿಸುವುದಕ್ಕೆ ಸಂಬಂಧಪಟ್ಟಂತೆ ಪ್ರಮುಖ ಆಧಾರ ಅಂಶಗಳಾಗಿವೆ ಮತ್ತು ಅವರ ನೆರವನ್ನು ಯಾವಾಗಲಾದರೂ ಹಾಗೂ ಅಗತ್ಯವಾದಾಗಲೆಲ್ಲ ಕೋರತತಕದ್ದು. ಜಿಲ್ಲಾಮಟ್ಟದ ಕಾರ್ಯಕಾರಿ ಸಮಿತಿಯು, ಸಮೀಕ್ಷೆಯನ್ನು ನಡೆಸುವುದಕ್ಕೆ

648.4

ತಾಲೂಕುವಾರು ತಂಡಗಳನ್ನು ರೂಪಿಸತಕ್ಕದ್ದು. ತಾಲ್ಲೂಕುವಾರು ತಂಡಕ್ಕೆ ಜಿಲ್ಲಾಧಿಕಾರಿಗಳಿಂದ ಆಯ್ಕೆಯಾದ ಒಬ್ಬ ಅಧಿಕಾರಿಯು ಮುಖ್ಯಸ್ಥನಾಗಿರಬಹುದಾಗಿದೆ. ಈ ಉದ್ದೇಶಕ್ಕಾಗಿ ತಹಸೀಲ್ದಾರರು, ತಾಲ್ಲೂಕು ಪಂಚಾಯಿತಿಗಳ ಕಾರ್ಯ ನಿರ್ವಹಣಾಧಿಕಾರಿಗಳು, ಕಾರ್ಮಿಕ ಪರಿವೀಕ್ಷಕರು (ಇನ್ಸ್‌ಪೆಕ್ಟರ್‌ಗಳು), ಕಾರ್ಖಾನೆಗಳು ಮತ್ತು ಬಾಯ್ಲರುಗಳ ಪರಿವೀಕ್ಷಕರು, ಮಕ್ಕಳ ಅಭಿವೃದ್ಧಿ ಯೋಜನಾಧಿಕಾರಿಗಳು, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಪುರಸಭಾ ಮುಖ್ಯಾಧಿಕಾರಿಗಳು ಮುಂತಾದವರ ಸೇವೆಯನ್ನು ಬಳಸಿಕೊಳ್ಳತಕ್ಕದ್ದು ಮತ್ತು ತಾಲ್ಲೂಕು ತಂಡಗಳಿಗೆ ವಾಸ್ತವಿಕ ಮಾಹಿತಿ ಸಂಗ್ರಹಣೆಗೆ ಕ್ಷೇತ್ರ ಮಟ್ಟದ ಕಾರ್ಯನಿರ್ವಾಹಕರನ್ನು ಒದಗಿಸಬಹುದು ಈ ಉದ್ದೇಶಕ್ಕಾಗಿ ಶಿಕ್ಷಕರು, ಗ್ರಾಮ ಲೆಕ್ಕಿಗರು, ಅಂಗನವಾಡಿ ಶಿಕ್ಷಕರು, ಆರೋಗ್ಯ ತಪಾಸಣಾಧಿಕಾರಿಗಳು ಮುಂತಾದವರ ಸೇವೆಗಳನ್ನು ಬಳಸಿಕೊಳ್ಳಬಹುದು.

8. ಸಮೀಕ್ಷೆಯನ್ನು ಪೂರ್ಣಗೊಳಿಸಿದ ತರುವಾಯ, ತಾಲ್ಲೂಕು ಮಟ್ಟದ ತಂಡಗಳು, ಅಪಾಯಕಾರಿ ಮತ್ತು ಅಪಾಯಕಾರಿಯಲ್ಲದ ಉದ್ಯೋಗಗಳಿಗೆ ಸಂಬಂಧಪಟ್ಟಂತೆ ಪ್ರತ್ಯೇಕವಾಗಿ ಕ್ರೋಢೀಕೃತ ಸಮೀಕ್ಷಾ ವರದಿಗಳನ್ನು ಜಿಲ್ಲಾಧಿಕಾರಿಗಳು ಮುಖ್ಯಸ್ಥರಾಗಿರುವ ಕಾರ್ಯಕಾರಿ ಸಮಿತಿಗೆ ಸಲ್ಲಿಸಬೇಕು. ನಮೂನೆಗಳಿಗೆ ಅನುಬಂಧ ಸಿ1 ಮತ್ತು ಸಿ2ನ್ನು ನೋಡಿ.

9. ಸಮೀಕ್ಷಾ ವರದಿಯನ್ನು ಪರಿಶೀಲನೆ ಮಾಡಿದ ಮೇಲೆ ಕಾರ್ಯಕಾರಿ ಸಮಿತಿಗೆ, ಯಾವುದೇ ಗ್ರಾಮವು "ಬಾಲ ಕಾರ್ಮಿಕ ರಹಿತ" ಗ್ರಾಮವೆಂದು ಕಂಡುಬಂದರೆ, ಆಗ, ಕೂಡಲೇ ಈ ಗ್ರಾಮವನ್ನು "ಬಾಲ ಕಾರ್ಮಿಕ ರಹಿತ ಗ್ರಾಮವೆಂದು" ಅಧಿಸೂಚಿಸತಕ್ಕದ್ದು ಮತ್ತು ಕೂಡಲೇ ಆ ವಿಷಯವನ್ನು ಕಾರ್ಮಿಕ ಆಯುಕ್ತರಿಗೆ ವರದಿ ಮಾಡತಕ್ಕದ್ದು.

10. ಹಾಗೆಯೇ, ಇಡೀ ತಾಲ್ಲೂಕಿನಲ್ಲಿ ಯಾವುದೇ ಕೆಲಸ ಮಾಡುವ ಮಗು ಕಂಡುಬರದಿದ್ದರೆ, ಕಾರ್ಯಕಾರಿ ಸಮಿತಿ ಮುಖ್ಯಸ್ಥರು, ಆ ತಾಲ್ಲೂಕನ್ನು "ಬಾಲ ಕಾರ್ಮಿಕ ರಹಿತ ತಾಲ್ಲೂಕು" ಎಂದು ಘೋಷಿಸತಕ್ಕದ್ದು ಮತ್ತು ಆ ಬಗ್ಗೆ ಕೂಡಲೇ ಕಾರ್ಮಿಕ ಆಯುಕ್ತರಿಗೆ ವರದಿ ಮಾಡತಕ್ಕದ್ದು.

11. ಆದರೆ, ಕಾರ್ಯಕಾರಿ ಸಮಿತಿಯು, ನಿರ್ದಿಷ್ಟ ಗ್ರಾಮ ಅಥವಾ ತಾಲ್ಲೂಕು ಅಥವಾ ಆ ವಿಷಯಕ್ಕೆ ಸಂಬಂಧಪಟ್ಟಂತೆ ಒಂದು ಜಿಲ್ಲೆಯನ್ನೂ "ಬಾಲ ಕಾರ್ಮಿಕ ರಹಿತ ಪ್ರದೇಶ" ವೆಂದಾಗಿ ಯಾವಾಗಲಾದರೂ ಘೋಷಿಸಿದಲ್ಲಿ, ಆ ಪ್ರದೇಶದಲ್ಲಿನ ಕಾರ್ಮಿಕ ಮಾರುಕಟ್ಟೆಗೆ ಯಾವುದೇ ಹೊಸ ಮಗುವು ಪ್ರವೇಶಿಸದಂತೆ ನೋಡಿಕೊಳ್ಳಲು ಸದಾ ಕಾಲ ಕಟ್ಟು ನಿಟ್ಟಿನ ನಿವಾರಣಾ ಕ್ರಮಗಳನ್ನು ತೆಗೆದುಕೊಳ್ಳುವ ಮೂಲಕ ಎಂದಿಗೂ ಆ ಸ್ಥಿತಿಯನ್ನು ನಿರ್ವಹಿಸಿಕೊಂಡು ಬರುವುದು ಅಗತ್ಯವಾಗಿದೆ.

12. ನಿವಾರಣಾ ಕ್ರಮಗಳಲ್ಲಿ ಬಾಲ ಕಾರ್ಮಿಕ ಪದ್ಧತಿಯ ಕೆಡುಕಿನ ಬಗ್ಗೆ ಜಾಗೃತಿಯನ್ನು ಮೂಡಿಸುವುದು, ಅಧಿಕ ಪ್ರಮಾಣದಲ್ಲಿ ಪ್ರಚಾರ ಈ ಪಿಡುಗು ಎಂದಾದರೂ ತಲೆಎತ್ತುವ ಸಾಧ್ಯತೆ ಬಗ್ಗೆ ಎಚ್ಚರ ಇರುವಂತೆ ಸರ್ಕಾರೇತರ ಸಂಘ ಸಂಸ್ಥೆಗಳನ್ನು ಜಾಗೃತಗೊಳಿಸುವುದು ಒಳಗೊಂಡಿವೆ. ಈಗಾಗಲೇ ಸಾಧಿಸಿರುವುದನ್ನು ನಿರ್ವಹಿಸಲು ಮತ್ತು ಮುಂದೆ ಬಾಲ ಕಾರ್ಮಿಕ ಪದ್ಧತಿಯನ್ನು ಶಾಶ್ವತವಾಗಿ ನಿವಾರಿಸಲು ತಂದೆತಾಯಿಗಳು ಮತ್ತು ಸಮಾಜಕ್ಕೆ ತಿಳಿವಳಿಕೆ ನೀಡಬೇಕು.

13. ತಾಲ್ಲೂಕು ಘಟಕಗಳ ತಂಡದ ಮುಖಂಡರಿಗೆ, ಗುರಿಗಳನ್ನು ನಿಗದಿಪಡಿಸಬೇಕು ಮತ್ತು ಸಮೀಕ್ಷೆಯನ್ನು ಪೂರ್ಣಗೊಳಿಸಬೇಕಾದ ದಿನಾಂಕವನ್ನು ಗೊತ್ತುಪಡಿಸಬೇಕು. ಯಾವುದೇ ಸಂದರ್ಭದಲ್ಲಿ, ಸಮೀಕ್ಷೆಯನ್ನು, ಅದು ಆರಂಭಗೊಂಡ ದಿನಾಂಕದಿಂದ 3 ತಿಂಗಳೊಳಗೆ ಮುಕ್ತಾಯಗೊಳಿಸಬೇಕು.

14. ಸಮೀಕ್ಷೆಯನ್ನು ಪೂರ್ಣಗೊಳಿಸಿದ ನಂತರ, ಕಾರ್ಯಕಾರಿ ಸಮಿತಿಯು ಸಮೀಕ್ಷಾ ವರದಿಗಳನ್ನು ಸಲಹಾ ಸಮಿತಿಯ ಮುಂದೆ ಹಾಗೂ ಸಂಘದ ಮುಂದೆ ಸಹ ಮಂಡಿಸತಕ್ಕದ್ದು, ಅವುಗಳು ಅಸಮರ್ಥಿಸಿದ ಅನಂತರ,

ಅದನ್ನು ಅಪಾಯಕಾರಿ ಮತ್ತು ಅಪಾಯಕಾರಿಯಲ್ಲದ ಉದ್ಯೋಗಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಕಾರ್ಮಿಕ ಆಯುಕ್ತರಿಗೆ ಸಲ್ಲಿಸತಕ್ಕದ್ದು. ನಮೂನೆಗಳಿಗಾಗಿ ಅನುಬಂಧ-ಡಿ1 ಮತ್ತು ಡಿ 2ನ್ನು ನೋಡಿ.

15. ಬೀಡಿ ಕಟ್ಟುವುದು, ನೇಕಾರಿಕೆ, ಅಗರಬತ್ತಿ ಹೊಸೆಯುವುದು ಮುಂತಾದಂತಹ ವೃತ್ತಿಗಳ ಸಂಬಂಧದಲ್ಲಿ, ಈ ವೃತ್ತಿಗಳು ಮನೆಯ ಆವರಣಗಳಲ್ಲಿ ನಡೆಯುವುದರಿಂದ, ಕುಟುಂಬ ಸಮೀಕ್ಷೆಗಳನ್ನು ನಡೆಸುವುದು ಅಗತ್ಯವಾಗಿರುತ್ತದೆ.

16. ಬೀಡಿ ಕಟ್ಟುವುದು, ನೇಕಾರಿಕೆ, ಅಗರಬತ್ತಿ ಹೊಸೆಯುವುದು ಮುಂತಾದಂತಹ ವೃತ್ತಿಗಳಲ್ಲಿ ಕೆಲಸ ಮಾಡುವ ಮಕ್ಕಳ ಸಂಬಂಧದಲ್ಲಿ, ಮಗುವು ಶಾಲೆಗೆ ಹೋಗುತ್ತಿದ್ದು, ಬಿಡುವಿನ ವೇಳೆಯಲ್ಲಿ ಪಾಲಕರಿಗೆ ಸಹಾಯ ಮಾಡುತ್ತಿದ್ದರೆ, ಆಗ ಆ ಮಗುವನ್ನು ಬಾಲ ಕಾರ್ಮಿಕನೆಂದು ಪರಿಗಣಿಸಲಾಗುವುದಿಲ್ಲ. ಆದರೆ, ಮಗುವು ಶಾಲೆಗೆ ಹೋಗುತ್ತಿದ್ದು, ಬಿಡುವಿನ ವೇಳೆಯಲ್ಲಿ ಅಪಾಯಕಾರಿ ಉದ್ಯೋಗಗಳಲ್ಲಿ ಕೆಲಸ ಮಾಡುವ ಮೂಲಕ ಪಾಲಕರಿಗೆ ಸಹಾಯ ಮಾಡುತ್ತಿದ್ದರೂ, ಆಗ ಆತನನ್ನು ಬಾಲಕಾರ್ಮಿಕನೆಂದು ವರ್ಗೀಕರಿಸತಕ್ಕದ್ದು.

17. ಸಮೀಕ್ಷಾ ತಂಡಗಳು, ಯಾವುದೇ ರಕ್ಷಣೆಯು ಅಗತ್ಯವೆನಿಸಿದರೆ, ಮುಂಚಿತವಾಗಿ, ಆ ಬಗ್ಗೆ ಲಿಖಿತದಲ್ಲಿ ಪೋಲೀಸರಿಗೆ ತಿಳಿಸಬಹುದು.

18. ಪ್ರತಿಯೊಂದು ಸಮೀಕ್ಷಾ ತಂಡವು, ಸಮೀಕ್ಷೆ ನಡೆಯುವುದಕ್ಕೆ ಅಗತ್ಯವಾದ ಸಾಮಗ್ರಿಗಳ ಸಾಕಷ್ಟು ಪೂರೈಕೆಯನ್ನು ಇಟ್ಟುಕೊಂಡಿರತಕ್ಕದ್ದು. ಸಮೀಕ್ಷೆಗಳ ಮೇಲ್ವಿಚಾರಣೆಗಾಗಿ ಸರ್ಕಾರಿ ವಾಹನಗಳನ್ನು ಉಪಯೋಗಿಸಿಕೊಳ್ಳಬಹುದು ಮತ್ತು ಆ ಬಗ್ಗೆ ಇಂಧನ ವೆಚ್ಚವನ್ನು ಸಮೀಕ್ಷೆಗೆ ಹಂಚಿಕೆ ಮಾಡಲಾದ ನಿಧಿಗಳಿಂದ ಭರಿಸಬಹುದು.

19. ಅನಾಥರ ವಿಷಯದಲ್ಲಿ, ಕೌಟುಂಬಿಕ ವಿವರಗಳು ಲಭ್ಯವಾಗದಿದ್ದಲ್ಲಿ, ಪೋಷಕರ ಅಥವಾ ಉಸ್ತುವರಿದಾರರ ವಿವರಗಳನ್ನು ಪಡೆದುಕೊಳ್ಳಬಹುದು.

20. ಸಮೀಕ್ಷೆಯು ತಂಡಕ್ಕೆ ಹಂಚಿಕೆ ಮಾಡಲಾದ ಇಡೀ ಪ್ರದೇಶವನ್ನು ಒಳಗೊಂಡಿರತಕ್ಕದ್ದು ಮತ್ತು ಯಾವುದೇ ಸಂದರ್ಭಗಳಲ್ಲಿ, ಯಾವುದೇ ಪ್ರದೇಶ, ಸಂಸ್ಥೆ, ಉದ್ಯಮವನ್ನು ಸಮೀಕ್ಷೆಯಿಂದ ಬಿಟ್ಟುಬಿಡತಕ್ಕದ್ದಲ್ಲ.

21. ಸಮೀಕ್ಷೆಯಲ್ಲಿ ಪಾಲ್ಗೊಂಡ ಎಲ್ಲಾ ಸಿಬ್ಬಂದಿಗೆ ತರಬೇತಿಯನ್ನು ನೀಡತಕ್ಕದ್ದು. ಪ್ರತಿ ಜಿಲ್ಲೆಗೆ ಸಂಬಂಧಿಸಿದಂತೆ ಕಾರ್ಮಿಕ ಆಯುಕ್ತರೊಂದಿಗೆ ಸಮಾಲೋಚಿಸಿ ವಿಶೇಷ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಬಹುದು.

22. ಸಮೀಕ್ಷಾ ವರದಿಗಳ ಕ್ರೋಢೀಕರಣವನ್ನು, ಅಪಾಯಕಾರಿ ಮತ್ತು ಅಪಾಯಕಾರಿಯಲ್ಲದ ಉದ್ಯೋಗಗಳಿಗಾಗಿ, ಗ್ರಾಮವಾರು, ತಾಲ್ಲೂಕುವಾರು ಮತ್ತು ಜಿಲ್ಲಾವಾರಾಗಿ ಪ್ರತ್ಯೇಕವಾಗಿ ಮಾಡಬಹುದು.

23. ಪೂರ್ಣಗೊಂಡ ಸಮೀಕ್ಷಾ ವರದಿಗಳನ್ನು, ಮುಂದಿನ ಉಪಯೋಗಕ್ಕಾಗಿ ಕಂಪೂಟರ್‌ಗಳಲ್ಲಿ ದಾಖಲಿಸಬಹುದು.

24. ಸಮೀಕ್ಷಾ ನಮೂನೆಗಳು ಮತ್ತು ಇತರ ಸಾಮಗ್ರಿಗಳ ಮುದ್ರಣ ಮತ್ತು ಸರಬರಾಜು ಜಿಲ್ಲಾ ಸಂಘದ ಜವಾಬ್ದಾರಿಯಾಗಿರತಕ್ಕದು.

## ಅಧ್ಯಾಯ - V

### ಬಾಲ ಕಾರ್ಮಿಕರ ಬಿಡುಗಡೆ ಮತ್ತು ಪುನರ್ವಸತಿ: ಅಮಲ್ಜಾರಿ

### ಎ. ಬಾಲ ಕಾರ್ಮಿಕರ ಬಿಡುಗಡೆ

1. ಸಮೀಕ್ಷಾ ವರದಿಗಳು, ಕೆಲಸದಿಂದ ಮಕ್ಕಳನ್ನು ಬಿಡುಗಡೆಗೊಳಿಸುವುದಕ್ಕೆ ಆಧಾರವಾಗಿರ ತಕ್ಕದ್ದು.

2. ಬಾಲ ಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮ, 1986ರ ಪ್ರಕರಣ 17ರ ಮೇರೆಗೆ ಪರಿವೀಕ್ಷಕರಾಗಿ ಅಧಿಸೂಚಿಸಲಾದ ಮತ್ತು ಜಿಲ್ಲೆಯಲ್ಲಿ ಲಭ್ಯವಿರುವ ಎಲ್ಲಾ ಇಲಾಖಾ ಕಾರ್ಯನಿರ್ವಾಹಕರನ್ನು ತಾಲ್ಲೂಕುವಾರು ತಂಡಗಳಾಗಿ ರಚಿಸತಕ್ಕದ್ದು ಮತ್ತು ಈ ತಂಡಗಳಿಗೆ ಸಮೀಕ್ಷೆಯಲ್ಲಿ ಗುರುತಿಸಲಾದ ಮಕ್ಕಳನ್ನು ಬಿಡುಗಡೆಗೊಳಿಸುವುದಕ್ಕೆ ನಿರ್ದಿಷ್ಟ ಕಾಲಮಿತಿ ಗುರಿಗಳನ್ನು ನೀಡತಕ್ಕದ್ದು.

3. ಈ ತಂಡಗಳು ಗ್ರಾಮದಲ್ಲಿನ ಪ್ರತಿಯೊಂದು ಘಟಕಕ್ಕೂ ಭೇಟಿ ನೀಡಿ ಮಕ್ಕಳನ್ನು ಬಿಡುಗಡೆಗೊಳಿಸತಕ್ಕದ್ದು.

4. ಬಿಡುಗಡೆಗೊಳಿಸಲಾದ ಮಕ್ಕಳನ್ನು, ಅವರು ಈ ಮೊದಲು ಶಾಲೆಗೆ ಹೋಗಿರದಿದ್ದರೆ, ಕೂಡಲೇ ಅವರನ್ನು ಈ ಉದ್ದೇಶಕಾಗಿ ಸ್ಥಾಪಿಸಲಾದ ಶಾಲೆಗಳಿಗೆ ಸೇರಿಸತಕ್ಕದ್ದು.

5. ಮಕ್ಕಳು ಅದೇ ಶಾಲೆಗಳಲ್ಲಿ ವ್ಯಾಸಂಗ ಮುಂದುವರೆಸುವುದಕ್ಕೆ ಇಚ್ಛಿಸಿದರೆ ಮತ್ತು ತಂದೆತಾಯಿಗಳು ಮಕ್ಕಳನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಬಯಸಿದರೆ, ಆಗ ಅವರು ಹಾಗೆ ಮಾಡುವುದಕ್ಕೆ ಅವಕಾಶವನ್ನು ನೀಡತಕ್ಕದ್ದು. ಆದರೆ, ಅಂಥ ಮಕ್ಕಳು ಅದೇ ಸ್ಥಳದಲ್ಲಿ ಅಥವಾ ಬೇರೆ ಸ್ಥಳದಲ್ಲಿ ಕೆಲಸಕ್ಕೆ ಪುನಃ ಹೋಗದಂತೆ ಅವರ ಮೇಲೆ ಕಟ್ಟುನಿಟ್ಟಿನ ನಿಗಾ ಇಡಬೇಕು.

6. ಬಿಡುಗಡೆಗೊಳಿಸಲಾದ ಮಗುವಿಗೆ ಸಂಬಂಧಿಸಿದಂತೆ, ತಂದೆ ತಾಯಿಗಳು ಮಗುವನ್ನು ನೋಡಿಕೊಳ್ಳುವುದಕ್ಕೆ ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದರೆ, ಆಗ ಆ ಮಗುವನ್ನು ವಸತಿ ಶಾಲೆಗೆ ವರ್ಗಾಯಿಸತಕ್ಕದ್ದು ಮತ್ತು ಆ ಮಗುವು 14 ವರ್ಷ ವಯಸ್ಸು ಪೂರ್ಣಗೊಳ್ಳುವವರೆಗೆ ತನ್ನ ವಿದ್ಯಾಭ್ಯಾಸವನ್ನು ಮುಂದುವರೆಸುವುದಕ್ಕೆ ಅನುಮತಿ ನೀಡತಕ್ಕದ್ದು. ಆದರೆ, ಆತನು ತಂದೆ ತಾಯಿಗಳೊಂದಿಗೆ ಸಂಪರ್ಕವನ್ನು ಇಟ್ಟುಕೊಂಡು ಬರುವಂತೆ ಮತ್ತು ತಂದೆತಾಯಿಗಳು ಸಾಧ್ಯವಾದಷ್ಟು ಮೇಲಿಂದ ಮೇಲೆ ಮಕ್ಕಳನ್ನು ಭೇಟಿ ಮಾಡಿ ಬರುವಂತೆ ಎಚ್ಚರವಹಿಸತಕ್ಕದ್ದು.

7. ಸಮೀಕ್ಷಾ ವರದಿಗಳ ಪ್ರಕಾರ, ಬಿಡುಗಡೆಯಾದ ಮಗುವು ಅಪಾಯಕಾರಿ ಉದ್ಯೋಗದಿಂದ ಬಿಡುಗಡೆಯಾದುದಾಗಿದ್ದರೆ. ನಿರ್ದಿಷ್ಟಪಡಿಸಲಾದ ಕಾರ್ಯವಿಧಾನವನ್ನು ಮತ್ತು ಈ ಸಂಬಂಧದಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿದ ನಿರ್ದೇಶನಗಳನ್ನು ಪಾಲಿಸಲು ಎಲ್ಲಾ ಬಗೆಯ ಜಾಗರೂಕತೆಯನ್ನು ವಹಿಸತಕ್ಕದ್ದು. ಈ ಮುಂದಿನ ಕ್ರಮಗಳನ್ನು ಉಪಕ್ರಮಿಸುವುದು ಅಗತ್ಯವಾಗಿದೆ.

   ಎ) ಸಂಬಂಧಪಟ್ಟ ಪರಿವೀಕ್ಷಕನ ಮೂಲಕ ನಿಯೋಜಕನಿಗೆ ಕಾರಣ ತೋರಿಸುವ ನೋಟೀಸು (ಷೋ ಕಾಸ್ ನೋಟೀಸು) ನೀಡುವುದು. ನಮೂನೆಗೆ ಅನುಬಂಧ 'ಇ' ಯನ್ನು ನೋಡಿ

   ಬಿ) ಬಾಲ ಕಾರ್ಮಿಕನನ್ನು ನಿಯೋಜಿಸಿಕೊಂಡಿರುವುದಕ್ಕೆ ಸಂಬಂಧಿಸಿದಂತೆ ಕಾರಣ ತೋರಿಸುವ ನೋಟೀಸಿಗೆ ನೀಡಿದ ಉತ್ತರವು ತೃಪ್ತಿಕರವಾಗದಿದ್ದಲ್ಲಿ ಮತ್ತು ಮನವರಿಕೆಯಾಗದಿದ್ದಲ್ಲಿ ಆ ನಿಯೋಜಕನ ವಿರುದ್ಧ ಕಾನೂನು ಕ್ರಮ ಜರುಗಿಸುವುದು

ಸಿ) ನಿಯೋಜಕನಿಂದ 20,000-00 ರೂ.ಗಳನ್ನು ಸಂಗ್ರಹಿಸಿ ಅದನ್ನು ಮೂಲನಿಧಿಯೊಂದಿಗೆ ಠೇವಣಿ ಇಡುವುದು.

ಡಿ) ನಿಯೋಜಕನು ಗೊತ್ತುಪಡಿಸಲಾದಂತಹ 20,000-00 ರೂ.ಗಳನ್ನು ನೀಡುವಲ್ಲಿ ವಿಫಲನಾದರೆ, ಅದನ್ನು ಜಿಲ್ಲಾ ಕಂದಾಯ ಪ್ರಾಧಿಕಾರಿಗಳು ಭೂ ಕಂದಾಯದ ಬಾಕಿ ವಸೂಲು ಮಾಡುವಂತೆ ವಸೂಲು ಮಾಡುವುದು.

ಇ) ಜಿಲ್ಲಾ ಪ್ರಾಧಿಕಾರಿಗಳು, ವಿಮುಕ್ತರಾದ ಮಕ್ಕಳ ಕುಟುಂಬದ ಒಬ್ಬ ವಯಸ್ಕ ಸದಸ್ಯನಿಗೆ ಉದ್ಯೋಗವನ್ನು ಒದಗಿಸುವುದು.

ಎಫ್) ಸರ್ಕಾರವು ಅಂಥ ಉದ್ಯೋಗವನ್ನು ಒದಗಿಸುವಲ್ಲಿ ವಿಫಲವಾದರೆ, ಸರ್ಕಾರವು ಮೂಲ ನಿಧಿಯ ಸಂಬಂಧದಲ್ಲಿ 5,000-00 ರೂ.ಗಳನ್ನು ನೀಡುವುದು.

ಜಿ) ಮೂಲ ನಿಧಿಗಳಿಂದ ಬರುವ ಆದಾಯವನ್ನು, ಸರ್ಕಾರಿ ಆದೇಶದಲ್ಲಿ ಗೊತ್ತುಪಡಿಸಲಾದ ರೀತಿಯಲ್ಲಿ ಬಳಸತಕ್ಕದ್ದು. ಹೆಚ್ಚಿನ ವಿವರಗಳಿಗೆ ಅನುಬಂಧ - ಎಫ್ ನೋಡಿ.

8. ಸಂಘವು, ಕೆಲಸದಿಂದ ಬಿಡುಗಡೆಗೊಳಿಸಲಾದ ಮಗುವಿನ ಕುಟುಂಬದ ಆರ್ಥಿಕ ಸ್ಥಿತಿಯನ್ನು ನಿರ್ಧರಿಸತಕ್ಕದ್ದು ಮತ್ತು ಮಗುವನ್ನು ಕೆಲಸದಿಂದ ಬಿಡಿಸುವುದರಿಂದ ಆ ಕುಟುಂಬವು ಬಡತನಕ್ಕೆ ಸಿಲುಕುವುದೆಂದು ಕಂಡುಬಂದರೆ, ಆಗ ಜಿಲ್ಲಾ ಆಡಳಿತವು ಅಂಥ ಕುಟುಂಬಕ್ಕೆ ಅವಶ್ಯಕವಾದ ನೆರವನ್ನು ಒದಗಿಸತಕ್ಕದ್ದು.

9. ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ ಇಲಾಖೆಯು ಅವಶ್ಯಕವೆನಿಸಿದೆಡೆಗಳಲ್ಲೆಲ್ಲಾ, ಕೆಲಸದಿಂದ ಬಿಡುಗಡೆಗೊಳಿಸಲಾದ ಮಕ್ಕಳ ಅಗತ್ಯ ಕುಟುಂಬಗಳ ಬಡತನ ನಿವಾರಣೆಗೆ ಕಾರ್ಯಪ್ರವೃತ್ತವಾಗಬಹುದು.

## ಬಿ. ಪುನರ್ವಸತಿ ಕಲ್ಪಿಸುವುದು:

1. ಬಿಡುಗಡೆಗೊಳಿಸಲಾದ ಮಕ್ಕಳಿಗೆ ಪುನರ್ವಸತಿಯನ್ನು ಒದಗಿಸುವುದು ಜಿಲ್ಲಾ ಬಾಲ ಕಾರ್ಮಿಕ ಯೋಜನಾ ಸಂಘದ ಏಕೈಕ ಜವಾಬ್ದಾರಿಯಾಗಿದೆ.

2. ಎನ್.ಸಿ.ಎಲ್.ಪಿ. ಜಿಲ್ಲೆಗಳ ಸಂಬಂಧದಲ್ಲಿ, ಹಾಲಿ ಇರುವ ಯೋಜನಾ ಸಂಘಗಳು ಮುಂದುವರಿಯುವವು ಹಾಗೂ ಎನ್‌ಸಿಎಲ್‌ಪಿ ನಿಧಿಯಿಂದ ಖರ್ಚು ವೆಚ್ಚ ನಿರ್ವಹಿಸುವವು.

3. ಎನ್‌ಸಿಎಲ್‌ಪಿ ರಹಿತ ಜಿಲ್ಲೆಗಳ ಸಂಬಂಧದಲ್ಲಿ, ಎನ್‌ಸಿಎಲ್‌ಪಿ ಜಿಲ್ಲೆಗಳಂತಹ ವ್ಯವಸ್ಥೆಗಳನ್ನು ಸೃಜಿಸಬೇಕು ಮತ್ತುಅದಕ್ಕೆ ತಗಲುವ ವೆಚ್ಚವನ್ನು ಕ್ರಿಯಾ ಯೋಜನೆಯ ನಿಧಿಗಳಿಂದ ಭರಿಸತಕ್ಕದ್ದು.

4. ಪ್ರತಿ ಸಂಘವು, ಸಂಚಿತ ಗೌರವಧನ ಮೇಲೆ ನಿಯೋಜಿತನಾದ ಪೂರ್ಣಕಾಲಿಕ ಯೋಜನಾ ನಿರ್ದೇಶಕರನ್ನು ಹೊಂದಿರತಕ್ಕದ್ದು. ಯೋಜನೆಯ ಮೂಲಕ ನಿಯೋಜಿತರಾದ ಎಲ್ಲಾ ಸಿಬ್ಬಂದಿಗೌರವಧನದ ಆಧಾರದ ಮೇಲೆ ಕಾರ್ಯನಿರ್ವಹಿಸತಕಕ್ಕದ್ದು ಮತ್ತು ಅವರನ್ನು ನೌಕರರೆಂದು ನಿಯೋಜಿಸಲಿಕ್ಕಾಗದ. ಸಿಬ್ಬಂದಿ ವ್ಯವಸ್ಥೆ ಹಾಗೂ ಈ ಉದ್ದೇಶಕ್ಕೆ ಹಣ ಒದಗಿಸುವ ವಿಧಾನವನ್ನು ಅನುಬಂಧದಲ್ಲಿ ಸೂಚಿಸಲಾಗಿದೆ. ಅನುಬಂಧ - 'ಯು' ಅನ್ನು ನೋಡಿ.

5. ಸಂಘವು ಕ್ರಿಯಾ ಯೋಜನೆಯಡಿ ಯಾವುದೇ ವಾಹನಗಳನ್ನು ಖರೀದಿಸತಕ್ಕದ್ದಲ್ಲ. ಆದರೆ, ಸಾರ್ವಜನಿಕ ಸಾರಿಗೆಯಿಂದಾಗುವು ವಾಸ್ತವಿಕ ಪ್ರಯಾಣ ವೆಚ್ಚಗಳನ್ನು, ಯೋಜನಾ ಕಚೇರಿಗಳ ಕಚೇರಿ ವೆಚ್ಚಗಳಿಂದ ತುಂಬಿಕೊಡಬಹುದಾಗಿದೆ.

6. ಜಿಲ್ಲಾ ಯೋಜನಾ ಸಂಘಗಳು, ಲೆಕ್ಕಪತ್ರಗಳೂ ಸೇರಿದಂತೆ ಅವಶ್ಯಕವಾದ ಎಲ್ಲಾ ದಾಖಲೆಗಳನ್ನು ನಿರ್ವಹಿಸತಕ್ಕದ್ದು.

678.5

7. ಯೋಜನಾ ಸಂಘವು ಅನುಬಂಧ ಎಸ್ ಮತ್ತು ಎಸ್ 1ರಲ್ಲಿ ಕಾಲಕಾಲಕ್ಕೆ ಪ್ರಗತಿ ವರದಿಗಳನ್ನು ಸಲ್ಲಿಸತಕ್ಕದ್ದು.

8. ನಿಧಿಗಳನ್ನು, ಪುನರ್ವಸತಿ ಕಲ್ಪಿಸಲಾದ ಮಕ್ಕಳ ವಾಸ್ತವಿಕ ಸಂಖ್ಯೆಯನ್ನು ಆಧರಿಸಿ ಬಿಡುಗಡೆ ಮಾಡಲಾಗುವುದೇ ಹೊರತು ಮಂಜೂರಾದ ಸಂಖ್ಯೆಯನ್ನಲ್ಲ.

9. ಸಂಘಗಳು ಅನುಬಂಧ - 'ಯು' ನಲ್ಲಿ ಸೂಚಿಸಲಾದಂಥ ಸರ್ಕಾರಿ ಅನುದಾನಗಳ ಮೂಲಕ ನೆರವನ್ನು ಪಡೆಯುವವು.

10. ಸರ್ಕಾರವು ಅಗತ್ಯಪಡಿಸಿದಂತೆ ನಿಯತಕಾಲಿಕ ವರದಿಗಳನ್ನು ಸಲ್ಲಿಸಬೇಕು.

11. ಗೌರವಧನ ಸಂಭಾವನೆ ಆಧಾರದ ಮೇಲೆ ನಿಯೋಜಿತರಾದ ಯೋಜನಾ ನಿರ್ದೇಶಕರು, ಸಂಘದ ಅಧ್ಯಕ್ಷರಿಗೆ ನೇರವಾಗಿ ವರದಿ ಸಲ್ಲಿಸತಕ್ಕದ್ದು.

12. ಪ್ರತಿಯೊಂದು ಎನ್‌ಸಿಎಲ್‌ಪಿ ರಹಿತ ಜಿಲ್ಲೆಗಳಲ್ಲಿ 10 ವಿಶೇಷ ವಸತಿ ಶಾಲೆಗಳನ್ನು ಸ್ಥಾಪಿಸಲು ಉದ್ದೇಶಿಸಿದ್ದಾಗ್ಯೂ, ಸಂಘವು ಕೆಲಸದಿಂದ ಬಿಡುಗಡೆಗೊಳಿಸಲಾದ ಮಕ್ಕಳಿಗೆ ಪುನರ್ವಸತಿ ಅಗತ್ಯತೆಗಳನ್ನಾಧರಿಸಿ ಮಂಜೂರು ಮಾಡಬೇಕಾದ ಶಾಲೆಗಳ ವಾಸ್ತವಿಕ ಸಂಖ್ಯೆಯನ್ನು ನಿರ್ಧರಿಸಬಹುದು. (ವಿಶೇಷ ಶಾಲೆಗಳಿಗೆ ಕಲ್ಪಿಸಲಾದ ಬಜೆಟ್ ಉಪಬಂಧದ ವಿವರ ಅನುಬಂಧ- 'ಜಿ' ನಲ್ಲಿದೆ).

13. ವಿಶೇಷ ವಸತಿ ಶಾಲೆಯ ಮಂಜೂರಾತಿಗೆ ಸಂಬಂಧಿಸಿದ ಪ್ರಸ್ತಾವಗಳನ್ನು ಜಿಲ್ಲಾಧಿಕಾರಿಗಳು ಕಾರ್ಮಿಕ ಆಯುಕ್ತರಿಗೆ ಸಲ್ಲಿಸಬೇಕು ಮತ್ತು ಕಾರ್ಮಿಕ ಆಯುಕ್ತರು ಸರ್ಕಾರದ ಅನುಮೋದನೆಯನ್ನು ಪಡೆಯತಕ್ಕದ್ದು ಮತ್ತು ಆ ಕುರಿತು ಸಂಘದ ಅಧ್ಯಕ್ಷರಾಗಿರುವ ಜಿಲ್ಲಾಧಿಕಾರಿಗಳಿಗೆ ತಿಳಿಸತಕ್ಕದ್ದು. ಪ್ರಸ್ತಾವನೆಯು, ಪುನರ್ವಸತಿ ಕಲ್ಪಿಸಬೇಕಾದ ಮಕ್ಕಳ ಸಂಖ್ಯೆ, ಶಾಲೆಯ ನಿರ್ದಿಷ್ಟ ಸ್ಥಳ ಮತ್ತು ವಸತಿ ಸೌಲಭ್ಯ, ಶಾಲೆಯನ್ನು ನಿರ್ವಹಿಸಲು ಉದ್ದೇಶಿಸಿರುವ ಸರ್ಕಾರೇತರ ಸಂಸ್ಥೆಯ ಹೆಸರು ಮುಂತಾದಂತಹ ಅಗತ್ಯವಾದ ಎಲ್ಲಾ ಮಾಹಿತಿಯನ್ನು ಒಳಗೊಂಡಿರತಕ್ಕದ್ದು.

14. ಪುನರ್ವಸತಿ ಕಲ್ಪಿಸುವ ವಿಶೇಷ ವಸತಿ ಶಾಲೆಗಳನ್ನು ಸರ್ಕಾರೇತರ ಸಂಸ್ಥೆಗಳು ನಿರ್ವಹಿಸತಕ್ಕದ್ದು. ಆದರೆ ಸರ್ಕಾರೇತರ ಸಂಸ್ಥೆಗಳು ಲಭ್ಯವಿಲ್ಲದಿರುವಲ್ಲೆಲ್ಲ ಸಂಘ ಶಾಲೆಗಳನ್ನು ನಡೆಸಬಹುದು.

15. ಸರ್ಕಾರೇತರ ಸಂಸ್ಥೆಗಳಿಗೆ ಶಾಲೆಗಳನ್ನು ಮಂಜೂರಾತಿಗೆ ಸಂಬಂಧಪಟ್ಟಂತೆ ಶಿಫಾರಸು ಮಾಡುವಾಗ, ಸರ್ಕಾರೇತರ ಸಂಸ್ಥೆಗಳ ವಿಶ್ವಾಸಾರ್ಹತೆ, ಅವುಗಳ ಹಿನ್ನೆಲೆ, ಅವುಗಳ ಉದ್ದೇಶ ಮತ್ತು ಅವುಗಳ ಹಿಂದಿರುವ ವ್ಯಕ್ತಿಗಳ ಹಿನ್ನೆಲೆಯನ್ನು ಸಹ ಪರಿಶೀಲಿಸುವಲ್ಲಿ ಎಚ್ಚರವಹಿಸತಕ್ಕದ್ದು.

16. ಸಾಧ್ಯವಾದಷ್ಟು ಮಟ್ಟಿಗೆ ಯಾವುದೇ ಸರ್ಕಾರೇತರ ಸಂಸ್ಥೆಗೆ ಜಿಲ್ಲೆಯಲ್ಲಿ ಒಂದಕ್ಕಿಂತ ಹೆಚ್ಚಿನ ಶಾಲೆಗಳನ್ನು ನೀಡತಕ್ಕದ್ದಲ್ಲ. ಆದರೆ, ಸರ್ಕಾರೇತರ ಸಂಸ್ಥೆಗಳ ವಿಶ್ವಾಸಾರ್ಹತೆ, ಪ್ರಾಮಾಣಿಕತೆ ಮತ್ತು ಕರ್ತವ್ಯನಿಷ್ಠೆಯ ಸ್ಥಿರಪಟ್ಟಿದರ ಮತ್ತು ಸಂಘಕ್ಕೆ ಆ ಸರ್ಕಾರೇತರ ಸಂಸ್ಥೆಯ ಆಪೇಕ್ಷಣೀಯತೆ ಮನವರಿಕೆಯಾದರೆ ಆಗ ಆ ಸರ್ಕಾರೇತರ ಸಂಸ್ಥೆಗೆ ಒಂದಕ್ಕಿಂತ ಹೆಚ್ಚಿನ ಶಾಲೆಗಳನ್ನು ನೀಡಬಹುದು. ಆದರೆ, ಯಾವುದೇ ಸಂದರ್ಭದಲ್ಲಿ, ಯಾವುದೇ ಸರ್ಕಾರೇತರ ಸಂಸ್ಥೆಗೆ ಒಂದು ಜಿಲ್ಲೆಯಲ್ಲಿ ಮೂರಕ್ಕಿಂತ ಹೆಚ್ಚಿನ ಶಾಲೆಗಳನ್ನು ನೀಡತಕ್ಕದ್ದಲ್ಲ.

17. ಸರ್ಕಾರೇತರ ಸಂಸ್ಥೆಯು, ಕ್ರಿಯಾ ಯೋಜನೆಯನ್ನು ಪ್ರಾರಂಭಿಸುವುದಕ್ಕೆ ಮೊದಲು ಕನಿಷ್ಠ 3 ವರ್ಷಗಳ ಹಿಂದೆಯೇ ನೋಂದಾಯಿತವಾಗಿರಬೇಕು ಮತ್ತು ಅವುಗಳ ಅಸ್ತಿತ್ವದ ಅವಧಿಯಲ್ಲಿ ಪ್ರಾಮಾಣಿಕ ಸೇವೆಯನ್ನು ಸಲ್ಲಿಸಿರಬೇಕು.

18. ಬಾಲ ಕಾರ್ಮಿಕರಿಗೆ ಸಂಬಂಧಿಸಿದಂತೆ ಸರ್ಕಾರೇತರ ಸಂಸ್ಥೆಯ ಕಲ್ಯಾಣ ಮತ್ತು ಇತರ ಕಾರ್ಯಕ್ರಮಗಳು, ಜಾತಿ, ಧರ್ಮ ಮತ್ತು ಭಾಷೆಗಳಲ್ಲಿ ಯಾವುದೇ ತಾರತಮ್ಯ ತೋರದ ಗುರಿ ಸಮೂಹಗಳಿಗೆ ಸೌಲಭ್ಯ ನೀಡುವಂತಿರತಕ್ಕದ್ದು.

19.ಸರ್ಕಾರೇತರ ಸಂಸ್ಥೆಯು ಉತ್ತಮ ಹಣಕಾಸು ಸ್ಥಿತಿಯಲ್ಲಿರತಕ್ಕದ್ದು ಹಾಗೂ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಮತ್ತು ಸರಾಗವಾಗಿ ನಿರ್ವಹಿಸುವ ಸಾಮರ್ಥ್ಯವನ್ನು ಪರಿಣಾಮಕಾರಿಯಾಗಿ ಮತ್ತು ಸರಾಗವಾಗಿ ನಿರ್ವಹಿಸುವ ಸಾಮರ್ಥ್ಯವನ್ನು ಹೊಂದಿರತಕ್ಕದ್ದು. ಸೂಮಾರು 50,000-00 ರೂ,ಗಳಷ್ಟು ಮೊತ್ತದ ಆವರ್ತಕ ಸ್ವರೂಪದ ಬಾಬುಗಳ ಮೇಲಿನ ಕನಿಷ್ಠ ವಾರ್ಷಿಕ ವೆಚ್ಚವನ್ನು ಇತರ ವಿಷಯಗಳ ಜೊತೆಗೆ ಈ ಸಂಬಂಧದಲ್ಲಿ ಸೂಚಕವೆಂದು ಪರಿಗಣಿಸಲಾಗುವುದು.

20.ಸಂಸ್ಥೆಯು, ಮೇಲಾಗಿ, ಸಂಬಂಧಪಟ್ಟ ಕ್ಷೇತ್ರದಲ್ಲಿ ಕಲ್ಯಾಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದರಲ್ಲಿ ಎರಡು ವರ್ಷ ಪ್ರಾಯೋಗಿಕ ಅನುಭವವನ್ನು ಹೊಂದಿರಬೇಕು.

21.ಶಾಲೆಯನ್ನು ನಡೆಸುವುದಕ್ಕೆ ಬೇಕಾದ ವಿವಿಧ ಪರಿಕರಗಳ ವೆಚ್ಚ ಹಾಗೂ ಸಿಬ್ಬಂದಿಗೆ ನೀಡುವ ಗೌರವಧನವೂ ಸೇರಿದಂತೆ ವೆಚ್ಚದ ಇತರ ಬಾಬುಗಳು ಮಂಜೂರಾದ ಗರಿಷ್ಠ ಪರಿಮಿತಿಯೊಳಗೆ ಹೊಂದಾಣಿಕೆ ಮಾಡುವಂತಿರಬೇಕು.

## ಅಧ್ಯಾಯ - VI

### ವಿಶೇಷ ವಸತಿ ಶಾಲೆಗಳು: ಬೋಧನೆ ಮತ್ತು ಪುನರ್ವಸತಿ ಕೇಂದ್ರಗಳು

1. ವಿಶೇಷ ವಸತಿ ಶಾಲೆಗಳನ್ನು (ಎಸ್‌ಆರ್‌ಎಸ್ ಗಳು) ಮುಖ್ಯವಾಗಿ ಕೆಲಸದಿಂದ ವಿಮುಕ್ತಿಗೊಳಿಸಲಾದ ಬಾಲ ಕಾರ್ಮಿಕರಿಗೆ ರಚಿಸಲಾಗಿದೆ ಮತ್ತು ಇದು 2001 ರಿಂದ 207 ರವರೆಗೆ 6 ವರ್ಷಗಳ ಅವಧಿಗೆ ಸಂಬಂಧಪಟ್ಟಿರುತ್ತದೆ. ಕೆಲಸದಿಂದ ವಿಮುಕ್ತಿಗೊಳಿಸಲಾದ ಮಕ್ಕಳ ಅಗತ್ಯತೆಗಳು ಸಾಮಾನ್ಯಶಾಲೆಗೆ ಹೋಗುವಂಥ ಮಕ್ಕಳ ಅಗತ್ಯತೆಗಿಂತ ಭಿನ್ನವಾಗಿರುತ್ತವೆ. ಇವರು ಸಾಮಾನ್ಯವಾಗಿ ಹೆಚ್ಚಿನ ವಯೋಮಾನದವರಾಗಿದ್ದು, ವಿವಿಧ ಅನುಭವಗಳನ್ನು ಹಾಗೂ ಬಹುಬಗೆಯ ಕೌಶಲ್ಯತೆಗಳನ್ನು ಹೊಂದಿರುತ್ತಾರೆ. ಇದರಿಂದಾಗಿ ಅವರನ್ನು ನೇರವಾಗಿ ಮುಖ್ಯವಾಹಿನಿ ಶಾಲೆಗಳಿಗೆ ಸೇರಿಸಲಿಕ್ಕಾಗದು. ಅದ್ದರಿಂದ, ಕೆಲಸದಿಂದ ವಿಮುಕ್ತರಾದ ಮಕ್ಕಳನ್ನು, ಮಧ್ಯಕಾಲೀನ ಅಥವಾ ತಾತ್ಕಾಲಿಕ ವ್ಯವಸ್ಥೆಯಾಗಿ ವಿಶೇಷ ವಸತಿ ಶಾಲೆ: ಕೇಂದ್ರಗಳಲ್ಲಿ ಇಡಲಾಗುವುದು. ಅಲ್ಲಿ ಅವರಿಗೆ ಅನೌಪಚಾರಿಕ ವಿಧಾನದ ಮೂಲಕ ಶಿಕ್ಷಣವನ್ನು ಒದಗಿಸಲಾಗುವುದು.

2. ವಿಶೇಷ ವಸತಿ ಶಾಲೆಗಳಲ್ಲಿನ ಮಕ್ಕಳಿಗೆ ಮೂರು ವರ್ಷಗಳ ಅವಧಿಯವರೆಗೆ ಶಿಕ್ಷಣ ನೀಡಬೇಕಾಗುತ್ತದೆ. 3 ವರ್ಷಗಳ ನಂತರ ಅವರು ಶಿಕ್ಷಣದ ಮುಖ್ಯವಾಹಿನಿಯಲ್ಲಿ ಸೇರಬೇಕಾಗುತ್ತದೆ. ಅವರಲ್ಲಿ ಕೆಲವರು ಅವರ ಕಲಿಕೆಯ ಸಾಮರ್ಥ್ಯವನ್ನಾಧರಿಸಿ 3 ವರ್ಷಗಳು ಪೂರ್ಣಗೊಳ್ಳುವ ಮೊದಲೇ ಮುಖ್ಯವಾಹಿನಿಗೆ ಸೇರಬಹುದಾಗಿದೆ.

3. ಹಾಲಿ ಇರುವ ಎನ್‌ಸಿಎಲ್‌ಪಿ ಶಾಲೆಗಳನ್ನು, ರಾಜ್ಯ ಸರ್ಕಾರದ ಪೂರ್ವಾನುಮೋದನೆಯೊಂದಿಗೆ, ರಾಜ್ಯ ಸರ್ಕಾರದ ಹೆಚ್ಚುವರಿ ನಿಧಿಗಳಿಂದ ಅಥವಾ ಕ್ರಿಯಾ ಯೋಜನೆಯಡಿಯ ಇತರ ಮೂಲಗಳಿಂದ ವಿಶೇಷ ವಸತಿ ಶಾಲೆಗಳಾಗಿ ಪರಿವರ್ತಿಸತಕ್ಕದ್ದು. ವಿಶೇಷ ವಸತಿ ಶಾಲೆಗಳಿಗೆ ಸಂಬಂಧಪಟ್ಟ ಬಜೆಟನ್ನು ಅನುಬಂಧ - 'ಜ' ನಲ್ಲಿ ತೋರಿಸಲಾಗಿದೆ.

4. ಜಿಲ್ಲೆಯಲ್ಲಿ ಸಾಕಷ್ಟು ಸಂಖ್ಯೆಯ ಅಪೇಕ್ಷಣೀಯ ಸರ್ಕಾರೇತರ ಸಂಸ್ಥೆಗಳು ಲಭ್ಯವಿಲ್ಲದಿರುವಂಥ ಸಂದರ್ಭದಲ್ಲಿ, ವಿಶೇಷ ವಸತಿ ಶಾಲೆಗಳನ್ನು ಯೋಜನಾ ಸಂಘವೇ ನಡೆಸಬಹುದಾಗಿದೆ. ಇದೊಂಂದು ಅಪವಾದವಾಗಿರತಕ್ಕದ್ದೇ ಹೊರತು ನಿಯಮವಲ್ಲ.

5. ಎಲ್ಲಾ ವಿಶೇಷ ವಸತಿ ಶಾಲೆಗಳು, ವರ್ಷದಲ್ಲಿ ಎಲ್ಲ 12 ತಿಂಗಳೂ ನಡೆಯತಕ್ಕದ್ದು. ಯಾವುದೇ ರಜೆ ಅಥವಾ ವಿರಾಮಕ್ಕೆ ಅವಕಾಶವಿಲ್ಲ.

6. ವಿಶೇಷ ವಸತಿ ಶಾಲೆಗಳು ಈ ಮುಂದಿನ ಮುಖ್ಯ ಕಾರ್ಯಚಟುವಟಿಕೆಗಳನ್ನು ಹೊಂದಿರತಕ್ಕದ್ದು:

    ಎ) ಶಿಕ್ಷಣ ಮತ್ತು ವೃತ್ತಿಪರ ತರಬೇತಿಯನ್ನು ನೀಡುವುದು.

    ಬಿ) ಆಹಾರ, ಪೌಷ್ಠಿಕಾಂಶ ಮತ್ತು ಸಮವಸ್ತ್ರಗಳನ್ನು ನೀಡುವುದು.

    ಸಿ) ನಿಯತಕಾಲಿಕ ಆರೋಗ್ಯ ತಪಾಸಣೆಗಳನ್ನು ವ್ಯವಸ್ಥೆಗೊಳಿಸುವುದು.

    ಡಿ) ಮಕ್ಕಳ ಸುರಕ್ಷೆ ಹಾಗೂ ಭದ್ರತೆಯ ಬಗ್ಗೆ ನೋಡಿಕೊಳ್ಳುವುದು.

    ಇ) ಈ ಮೇಲಿನ ಕಾರ್ಯಚಟುವಟಿಕೆಗಳಲ್ಲದೆ, ಮಕ್ಕಳಲ್ಲಿ ಹುದುಗಿರುವ ಪ್ರತಿಭೆ ಅಥವಾ ಕುಶಲತೆಯನ್ನು ಗುರುತಿಸುವುದಕ್ಕೆ ಎಲ್ಲಾ ಪ್ರಯತ್ನಗಳನ್ನು ಮಾಡತಕ್ಕದ್ದು ಮತ್ತು ಗುರುತಿಸಲಾದ ಅಂಥ ಪ್ರತಿಭಾವಂತ

ಹಾಗೂ ಕುಶಲ ಮಕ್ಕಳಿಗೆ ಪ್ರೋತ್ಸಾಹ ನೀಡಬೇಕು. ಇದರಿಂದ ಮಕ್ಕಳು ಸಾಧ್ಯವಾದಷ್ಟು ಮಟ್ಟಿಗೆ ಅಭಿವೃದ್ಧಿಯಾಗಲು ಸಹಾಯ ನೀಡಿದಂತಾಗುತ್ತದೆ.

7. ಬೋಧಕ ಸಿಬ್ಬಂದಿ ಮುಂತಾದವರ ಆಯ್ಕೆಯನ್ನು, ಸಂಘದ ಅನುಮೋದನೆಯೊಂದಿಗೆ ಸರ್ಕಾರೇತರ ಸಂಸ್ಥೆಗಳ ವಿವೇಚನೆಗೆ ಬಿಡತಕ್ಕದ್ದು.

8. ಸರ್ಕಾರೇತರ ಸಂಸ್ಥೆಗಳು ಮಾಡುವ ಬೋಧಕ ಮತ್ತು ಇತರ ಸಿಬ್ಬಂದಿಯ ನಿಯೋಜನೆಯು ಸಹ ಗೌರವಧನ ಸಂದಾಯದ ಮೇಲೆ ಸ್ವಇಚ್ಛಾ ಆಧಾರಿತವಾಗಿರತಕ್ಕದ್ದು. ಅವರಲ್ಲಿ ಯಾರೊಬ್ಬರೂ ಸರ್ಕಾರಿ ನೌಕರರೆಂದು ಕ್ಲೇಮು ಮಾಡಲಿಕ್ಕಾಗದು ಮತ್ತು ಅವರನ್ನು ಸಾಧ್ಯವಾದಷ್ಟು ಮಟ್ಟಿಗೆ ಸ್ಥಳೀಯ ಸಮುದಾಯ ಅಥವಾ ಗ್ರಾಮಗಳಿಂದ ಆಯ್ಕೆ ಮಾಡತಕ್ಕದ್ದು.

9. ಬೋಧಕ ಸಿಬ್ಬಂದಿಯೂ ಸೇರಿದಂತೆ, ಎಲ್ಲಾ ಸ್ವಯಂ ಸೇವಕರುಗಳಿಗೆ ಕ್ರಿಯಾ ಯೋಜನೆಯ ಉದ್ದೇಶಗಳ ಸಂಬಂಧದಲ್ಲಿ ತರಬೇತಿ ಮತ್ತು ಒರಿಯೆಂಟೇಷನ್ ಕೋರ್ಸು ನೀಡತಕ್ಕದ್ದು.

10. ಸಾಧ್ಯವಾದಷ್ಟು ಮಟ್ಟಿಗೆ ಶಾಲೆಗೆ ಪ್ರವೇಶಾವಕಾಶವನ್ನು 50 ಕ್ಕಿಂತ ಹೆಚ್ಚಿನ ವಿದ್ಯಾರ್ಥಿಗಳಿಗೆ ನೀಡತಕ್ಕದ್ದಲ್ಲ.

11. (ಎ) ಸಾಕ್ಷರತಾ ಕೌಶಲ್ಯ ಮತ್ತು ವೃತ್ತಿಪರ ತರಬೇತಿಯು ಪುನರ್ವಸತಿ ಪ್ರಕ್ರಿಯೆಯ ಅತ್ಯಾವಶ್ಯಕ ಅಂಗವಾಗಿರತಕ್ಕದ್ದು.

(ಬಿ) ಕೋರ್ಸಿಗೆ ಪಠ್ಯ ವಿಷಯವನ್ನು, 'ಡಿಪಿಇಪಿ' ಯಡಿ ಅನೌಪಚಾರಿಕ ಶಾಲೆಗಳಿಗೆ ರೂಪಿಸಲಾದ ಪುಸ್ತಕಗಳನ್ನು ಅಳವಡಿಸಿಕೊಳ್ಳುವ ಮೂಲಕ ರೂಪಿಸಬಹುದಾಗಿದೆ. ಮಕ್ಕಳು ಕಲಿಕೆಯ ಕನಿಷ್ಟ ಮಟ್ಟಗಳನ್ನು (ಎಂಎಲ್ಎಲ್) ಮತ್ತು ಔಪಚಾರಿಕ ಶಾಲೆಗಳಲ್ಲಿನ ಉನ್ನತ ತರಗತಿಗಳಿಗೆ ಪ್ರವೇಶ ಪಡೆಯುವುದಕ್ಕೆ ಔಪಚಾರಿಕ ಶಾಲಾ ವಿದ್ಯಾರ್ಥಿಗಳ ಜೊತೆಯಲ್ಲಿ ಪರೀಕ್ಷೆಗೆ ಕುಳಿತುಕೊಳ್ಳುವುದಕ್ಕೆ ಅಗತ್ಯವಾದಂಥ ಮಟ್ಟವನ್ನು ಪಡೆದುಕೊಳ್ಳಬೇಕು.

(ಸಿ) ವಿದ್ಯಾರ್ಥಿಗಳ ಗುಣಮಟ್ಟದ ಮೌಲ್ಯಮಾಪನವನ್ನು, ಔಪಚಾರಿಕ ಶಾಲೆಗಳಿಗೆ ಅಥವಾ ಅದೇ ಅನೌಪಚಾರಿಕ ಶಾಲೆಗಳಲ್ಲಿನ ಉನ್ನತ ತರಗತಿಗಳಿಗೆ ಅವರ ಪ್ರವೇಶವನ್ನು ಪರಿಗಣಿಸುವುದಕ್ಕಾಗಿ ನಿಯತ ಮಧ್ಯಂತರದಲ್ಲಿ ಮಾಡಬಹುದು.

(ಡಿ) ಪರೀಕ್ಷೆಗಳನ್ನು ನಿಯತ ಮಧ್ಯಂತರಗಳಲ್ಲಿ ನಡೆಸಬಹುದು.

(ಇ) ಪ್ರತಿಯೊಂದು ವಿಶೇಷ ವಸತಿ ಶಾಲೆಗಳಲ್ಲಿ ಸಾಧ್ಯವಾದಷ್ಟು ಬೇಗ ಜೀವನೋಪಾಯ ವೃತ್ತಿಗಳನ್ನು ಪ್ರಾರಂಭಿಸಬಹುದು. ಜಿಲ್ಲಾ ಬಾಲ ಕಾರ್ಮಿಕ ಸಂಘವು, ವೃತ್ತಿಗಳು ಮುಂತಾದವುಗಳನ್ನು ಅವುಗಳ ಉಪಯೋಗವನ್ನು ದೃಷ್ಟಿಯಲ್ಲಿಟ್ಟುಕೊಂಡು ನಿರ್ಧರಿಸತಕ್ಕದ್ದು. ವೃತ್ತಿ ತರಬೇತಿ, ನಿಯೋಜನೆ ಗಾರಿ ತಾಂತ್ರಿಕ ಸಂಸ್ಥೆಗಳೊಂದಿಗೆ ಮತ್ತು ಕೈಗಾರಿಕೆಗಳೊಂದಿಗೆ ಸಂಪರ್ಕ ಇಟ್ಟುಕೊಳ್ಳುವುದಕ್ಕೆ ಯುಕ್ತ ಗಮನ ಕೊಡತಕ್ಕದ್ದು.

(ಎಫ್) ವಿಶೇಷ ವಸತಿ ಶಾಲೆಗಳ ಕೆಲಸದ ವೇಳೆಯು, ಸ್ಥಳೀಯ ವ್ಯತ್ಯಾಸಗಳು ಯಾವುದಾದರೂ ಇದ್ದಲ್ಲಿ ಅವುಗಳೊಂದಿಗೆ ಸಾಮಾನ್ಯವಾಗಿ ಬೆಳಿಗ್ಗೆ 10 ರಿಂದ ಸಂಜೆ 4 ರವರೆಗೆ ಇರಬಹುದು.

12 (i) ವಿದ್ಯಾರ್ಥಿಗಳ ದೈಹಿಕ ಆರೋಗ್ಯ ಮತ್ತು ಆರೋಗ್ಯ ರಕ್ಷಣೆ ನೋಡಿಕೊಳ್ಳುವುದು, ಪ್ರಥಮ ಚಿಕಿತ್ಸಾ ಪಟ್ಟಿಗೆ, ನೇಲ್‌ಕಟ್ಟರ್, ಬಾಚಣಿಕೆ, ಸಾಬೂನು ಮತ್ತು ಅವಶ್ಯಕ ಔಷಧಿಗಳನ್ನು ಸಾದಿಲ್ವಾರು ನಿಧಿಯಿಂದ ಒದಗಿಸಬಹುದು.

(ii) ಪುನರ್ವಸತಿ ಕೇಂದ್ರಗಳಲ್ಲಿರುವ ಮಕ್ಕಳ ನಿಯತ ಆರೋಗ್ಯ ತಪಾಸಣೆಗಾಗಿ ಜಿಲಾ ಯೋಜನಾ ಸಂಘವು, ಸರ್ಕಾರೇತರ ಸಂಸ್ಥೆಗಳು ಇತರ ಸಂಸ್ಥೆಗಳ ಸಹಯೋಗದೊಂದಿಗೆ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಸರ್ಕಾರಿ ವೈದ್ಯರ ಮತ್ತುಸರ್ಕಾರಿ ಆಸ್ಪತ್ರೆಗಳ ಸೇವೆಯನ್ನು ಬಳಸಿಕೊಳ್ಳತಕ್ಕದ್ದು. ಈ ಉದ್ದೇಶಕ್ಕಾಗಿ ಈ ಯೋಜನೆಯಡಿ ಯಾವುದೇ ನಿಧಿಯನ್ನು ಒದಗಿಸಿಲ್ಲ. ವಿದ್ಯಾರ್ಥಿಗಳಿಗೆ ಶುದ್ಧವಾದ ಕುಡಿಯುವ ನೀರು ಲಭ್ಯವಾಗುವಂತೆ ನೋಡಿಕೊಳ್ಳತಕ್ಕದ್ದು.

13. ವಿಶೇಷ ವಸತಿ ಶಾಲೆಗಳಲ್ಲಿ ಕ್ರೀಡಾ ಚಟುವಟಿಕೆಯನ್ನು ನಿಯತವಾಗಿ ನಡೆಸಬಹುದು ಮತ್ತು ಪ್ರತಿಭಾವಂತ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರು ಕ್ರೀಡಾಕೂಟಗಳಲ್ಲಿ ಭಾಗವಹಿಸುವಂತೆ ಮಾಡತಕ್ಕದ್ದು.

14. ವಿದ್ಯಾರ್ಥಿಗಳಿಗಾಗಿ ಕಲೆ, ಹಾಡು, ನೃತ್ಯ, ಚರ್ಚಾಕೂಟ ರೂಪದ ಸಾಂಸ್ಕೃತಿಕ ಸಭೆಗಳನ್ನು ವ್ಯವಸ್ಥೆ ಮಾಡಬಹುದು. ಪ್ರತಿನಿತ್ಯ ವಿಶೇಷ ವಸತಿ ಶಾಲೆಗಳಲ್ಲಿ ವಿದ್ಯಾರ್ಥಿಗಳಿಂದ ನಿಯತವಾಗಿ ದೇಶಭಕ್ತಿಗೀತೆಗಳನ್ನು ಹಾಡಿಸಬಹುದು ಮತ್ತು ವಿದ್ಯಾರ್ಥಿಗಳಲ್ಲಿ ಶಿಸ್ತು ಹಾಗೂ ಏಕಾಗ್ರತೆ ತರಲು ಪ್ರಾರ್ಥನೆಗಳನ್ನು ಸಹ ನಡೆಸಬಹುದು.

15. ಪ್ರತಿಯೊಂದು ವಿಶೇಷ ವಸತಿ ಶಾಲೆಗಳಲ್ಲಿ ಸಂದರ್ಶಕರ ಪುಸ್ತಕವನ್ನು ನಿರ್ವಹಿಸಬೇಕು ಮತ್ತು ಎಲ್ಲಾ ಸಂದರ್ಶಕರು ಹಾಗೂ ಪರಿವೀಕ್ಷಣಾಧಿಕಾರಿಗಳು ತಮ್ಮ ಅಭಿಪ್ರಾಯಗಳನ್ನು ಅದರಲ್ಲಿ ದಾಖಲಿಸಬೇಕು.

16. ವಿದ್ಯಾರ್ಥಿಗಳಿಗೆ ಕ್ರಿಯಾ ಯೋಜನೆಯಡಿಯಲ್ಲಿ ಒದಗಿಸಲಾದ ನಿಧಿಗಳಿಂದ ಶಾಲಾ ಸಮವಸ್ತ್ರವನ್ನು ಒದಗಿಸಬೇಕು, ಇದಲ್ಲದೆ, ಬಾಲ ಕಾರ್ಮಿಕರ ತಂದೆತಾಯಿಗಳ ಸಮ್ಮತಿಯೊಂದಿಗೆ ಸ್ಟೈಫಂಡ್ ಹಣವನ್ನು ಅಥವಾ ಎನ್‌ಸಿಎಲ್‌ಪಿ ಜಿಲ್ಲೆಗಳ ಸಂದರ್ಭದಲ್ಲಿ ಜಿಲ್ಲಾ ಬಾಲ ಕಾರ್ಮಿಕ ಯೋಜನಾ ಸಂಘವು ನಿರ್ಣಯಿಸುವಂತಹ ಬಡ್ಡಿ ಹಣದಿಂದಲೂ ಹಣವನ್ನು ಬಳಸಿಕೊಳ್ಳಬಹುದು.

17. ವಿಶೇಷ ವಸತಿ ಶಾಲೆಗಳಲ್ಲಿ ವಿದ್ಯಾರ್ಥಿಗಳು ಇರುವಂತೆ ಸಂಬಂಧಪಟ್ಟ ಶಿಕ್ಷಕರು ನೋಡಿಕೊಳ್ಳತಕ್ಕದ್ದು. 5 ದಿನಗಳಿಗಿಂತ ಹೆಚ್ಚಿನ ಅವಧಿಯವರೆಗೆ ಯಾರಾದರೂ ಗೈರುಹಾಜರಾದರೆ, ಆ ಬಗ್ಗೆ ಯೋಜನಾ ಸಂಘಕ್ಕೆ ವರದಿ ಮಾಡಬೇಕು ಮತ್ತು ಅಂತಹ ವಿದ್ಯಾರ್ಥಿಯ ಶಿಕ್ಷಕರ ಮೂಲಕ ವೈಯಕ್ತಿಕವಾಗಿ ಭೇಟಿ ಮಾಡಬೇಕು.

18. ಶಿಕ್ಷಕರು, ತಿಂಗಳಿಗೊಮ್ಮೆ ಪಾಲಕರ ಸಭೆಯನ್ನು ನಡೆಸಬೇಕು ಮತ್ತು ಇಂತಹ ಸಭೆಗಳಲ್ಲಿ ಕ್ಷೇತ್ರಾಧಿಕಾರಿಗಳು: ಯೋಜನಾ ನಿರ್ದೇಶಕರು ಎರಡು ತಿಂಗಳಿಗೆ ಒಮ್ಮೆಯಾದರೂ ಪಾಲ್ಗೊಳ್ಳಬೇಕು.

**19. ಮೇಲ್ವಿಚಾರಣೆ:**

ಎ) ಯೋಜನೆಯ ಪರಿಣಾಮಕಾರಿ ನಿರ್ವಹಣೆಗಾಗಿ, ಜಿಲ್ಲಾ ಆಡಳಿತವು ನಿಕಟ ಮೇಲ್ವಿಚಾರಣೆಯನ್ನು ನಡೆಸತಕ್ಕದ್ದು.

ಬಿ) ಶಿಕ್ಷಣ, ಮಹಿಳಾ ಮತ್ತು ಮಕ್ಕಳ ಇಲಾಖೆ, ಸಮಾಜ ಕಲ್ಯಾಣ ಮತ್ತು ಸಂಬಂಧಪಟ್ಟ ಇತರ ಇಲಾಖೆಗಳ ಕಾರ್ಯನಿರ್ವಹಣಾ ಅಧಿಕಾರಿಗಳು ಪುನರ್ವಸತಿ ಕೇಂದ್ರಗಳ ನಿರ್ವಹಣೆಗೆ ಸಂಬಂಧಿಸಿದಂತೆ ನಿರ್ದಿಷ್ಟವಾಗಿ ಶಿಕ್ಷಣದ ಗುಣಮಟ್ಟ ಮತ್ತು ವೃತ್ತಿಪರ ಮೇಲ್ವಿಚಾರಣೆ ಸುಧಾರಣೆಗಾಗಿ ಜತೆಗೂಡತಕ್ಕದ್ದು.

**20. ಪ್ರಗತಿಯ ಪುನರವಲೋಕನ:**

ಜಿಲ್ಲಾ ಕಾರ್ಯಕಾರಿ ಸಮಿತಿಯು, ಮೂರು ತಿಂಗಳಿಗೊಮ್ಮೆಯಾದರೂ, ನಿಯತಕಾಲಿಕವಾಗಿ ವಿವಿಧ ಯೋಜನೆಗಳ ಕಾರ್ಯನಿರ್ವಹಣೆಯನ್ನು ಪುನರವಲೋಕಿಸತಕ್ಕದ್ದು.

21. ಜಿಲ್ಲಾ ಪುನರವಲೋಕನ ವರದಿಗಳನ್ನು ಕಾಲಕಾಲಕ್ಕೆ ಜಿಲ್ಲಾ ಮಟ್ಟದ ಯೋಜನಾ ಸಂಘ, ಜಿಲ್ಲಾ ಮಟ್ಟದ ಸಲಹಾ ಸಮಿತಿ ಮತ್ತು ಸರ್ಕಾರದ ಮುಂದೆ ಮಂಡಿಸತಕ್ಕದ್ದು.

## ಅಧ್ಯಾಯ - VII

**ನಿಧಿಗಳ ಬಿಡುಗಡೆ:**

(i) ಸರ್ಕಾರವು ಮಂಜೂರು ಮಾಡಿದ ಯೋಜನೆಗಳಿಗೆ ನಿಗದಿಪಡಿಸಿದ ರೀತಿಯಲ್ಲಿ ಸರ್ಕಾರವು ಜಿಲ್ಲಾ ಯೋಜನಾ ಸಂಘಕ್ಕೆ ನಿಧಿಯನ್ನು ಬಿಡುಗಡೆ ಮಾಡುವುದು.

(ii) ಪ್ರತಿಯಾಗಿ, ಜಿಲ್ಲಾ ಕಾರ್ಯಕಾರಿ ಸಮಿತಿಯ ಅನುಮೋದನೆಯೊಂದಿಗೆ ಜಿಲ್ಲಾ ಯೋಜನಾ ಸಂಘವು, ಮಂಜೂರಾತಿಯಲ್ಲಿ ವಿಧಿಸಲಾದಂತಹ ಕೆಲವು ನಿಬಂಧನೆಗಳಿಗೆ ಒಳಪಟ್ಟ ಸರ್ಕಾರೇತರ ಸಂಸ್ಥೆಗಳು ಮತ್ತು ಇತರ ಸಂಸ್ಥೆಗಳಿಗೆ ನಿಧಿಯನ್ನು ಬಿಡುಗಡೆ ಮಾಡುವುದು.

(iii) ಜಿಲ್ಲಾ ಯೋಜನಾ ಸಂಘಗಳು ಬಾಲ ಕಾರ್ಮಿಕರಿಗಾಗಿ ವಿಶೇಷ ವಸತಿ ಶಾಲೆಗಳ ಸ್ಥಾಪನೆ ಬಗ್ಗೆ ಕಾರ್ಯಚಟುವಟಿಕೆಯನ್ನು ಕೈಗೊಳ್ಳಲು ಸಂಬಂಧಪಟ್ಟ ಸರ್ಕಾರೇತರ ಸಂಸ್ಥೆಗಳ ಒಪ್ಪಿಗೆಯನ್ನು ಪಡೆಯಬೇಕು, ಅನಂತರ, ಮೊದಲ ಕಂತನ್ನು ಬಿಡುಗಡೆ ಮಾಡಬೇಕು.

(iv) ಜಿಲ್ಲಾ ಯೋಜನಾ ಸಂಘಗಳಿಗೆ ಮತ್ತು ಜಿಲ್ಲಾ ಯೋಜನಾ ಸಂಘಗಳಿಂದ ಸರ್ಕಾರೇತರ ಸಂಸ್ಥೆಗಳಿಗೆ ನಿಧಿಗಳನ್ನು ಬಿಡುಗಡೆ ಮಾಡುವ ರೀತಿಯನ್ನು ಅನುಬಂಧ -IIರಲ್ಲಿ ಸೂಚಿಸಲಾಗಿದೆ.

## ಅಧ್ಯಾಯ - VIII

**ಮೇಲ್ವಿಚಾರಣೆ:**

1) ರಾಜ್ಯಮಟ್ಟದಲ್ಲಿ, ಮಾನ್ಯ ಮುಖ್ಯಮಂತ್ರಿಗಳು ಅಧ್ಯಕ್ಷರಾಗಿರುವ ಉನ್ನತಮಟ್ಟದ ಸಮಿತಿಯು ಕಾರ್ಯಕ್ರಮದ ಮೇಲ್ವಿಚಾರಣೆ ನಡೆಸುವುದು.

2) ಎನ್‌ಸಿಎಲ್‌ಪಿ ಅಡಿಯಲ್ಲಿರುವಂತಹವುಳು ಒಳಗೊಂಡಂತೆ ವಿವಿಧ ಬಾಲಕಾರ್ಮಿಕ ಯೋಜನೆಗಳ ಸಮಗ್ರ ಮೇಲ್ವಿಚಾರಣೆ ಮತ್ತು ಮೌಲ್ಯ ನಿರ್ಧರಣೆ ನಡೆಸಲು ರಾಜ್ಯಮಟ್ಟದ ಸಮನ್ವಯ ಸಮಿತಿಯನ್ನು ರಚಿಸಲಾಗಿದೆ.

3) ಅದೇ ರೀತಿಯಾಗಿ, ಜಿಲ್ಲಾ ಮಟ್ಟದಲ್ಲಿ, ಜಿಲ್ಲಾ ಮಟ್ಟದ ಸಮಿತಿಗಳು ಕಾರ್ಯಕ್ರಮದ ಮೇಲ್ವಿಚಾರಣೆ ನಡೆಸುತ್ತವೆ.

4) ಸ್ಥಳೀಯ ಸಂಸ್ಥೆಗಳು ಮತ್ತು ಇತರ ಇಲಾಖೆಗಳು, ಪ್ರತೀ ಮಾಸಿಕ ಸಭೆಯಲ್ಲಿ ಕ್ರಿಯಾ ಯೋಜನೆಯಡಿಯಲ್ಲಿ ಸಾಧಿಸಲಾದ ಪ್ರಗತಿಯನ್ನು ಪುನರ್ ಅವಲೋಕಿಸಬೇಕು.

5) ನಿರಂತರ ಮಾಹಿತಿ ಒದಗಿಸುವುದು ಅವಶ್ಯಕವಾಗಿದೆ. ಇದರಿಂದ ಅವಶ್ಯಕವಾದೆಡೆಗಳಲ್ಲೆಲ್ಲ ಮಧ್ಯಂತರ ತಿದ್ದುಪಡಿ ಮಾಡಲು ಸಾಧ್ಯವಾಗುತ್ತದೆ.

6) ಕಾರ್ಮಿಕ ಇಲಾಖೆಯು, ಸಮಗ್ರ ಕಾರ್ಯಕ್ರಮದ ಅನುಷ್ಠಾನದ ಮೇಲ್ವಿಚಾರಣೆಗೆ ನೋಡಲ್ ಏಜೆನ್ಸಿಯಾಗಿರುತ್ತದೆ.

## ಅಧ್ಯಾಯ – IX

**ಪರಿವೀಕ್ಷಣೆ:**

**ಬಾಲ ಕಾರ್ಮಿಕ ಯೋಜನಾ ಸಂಘಗಳು: ಸರ್ಕಾರೇತರ ಸಂಸ್ಥೆಗಳು ಮತ್ತು ಪುನರ್ವಸತಿ ಕೇಂದ್ರಗಳು ಹಾಗೂ ವಿಶೇಷ ವಸತಿ ಶಾಲೆಗಳ ಪರಿವೀಕ್ಷಣೆಗಾಗಿ ಮಾರ್ಗದರ್ಶನ ಸೂತ್ರಗಳು:**

1) ರಾಜ್ಯಮಟ್ಟದ ಅಧಿಕಾರಿಗಳು, ಕಾರ್ಮಿಕ ಇಲಾಖೆಯ ನಿರ್ದೇಶನಗಳ ಮೇರೆಗೆ ಜಿಲ್ಲಾ ಯೋಜನಾ ಸಂಘಗಳು ಮತ್ತು ವಿಶೇಷ ವಸತಿ ಶಾಲೆಗಳ ನಿಯತಕಾಲಿಕ ಪರಿವೀಕ್ಷಣೆಯನ್ನು ಕೈಗೊಳ್ಳುವರು ಮತ್ತು ಆ ಸಂಬಂಧದಲ್ಲಿ ಇಲಾಖೆಗೆ ನಿಗದಿತ ನಮೂನೆಯಲ್ಲಿ ಪರಿವೀಕ್ಷಣಾ ವರದಿಯನ್ನು ಸಲ್ಲಿಸತಕ್ಕದ್ದು. ಅದೇ ರೀತಿ, ಜಿಲ್ಲಾಧಿಕಾರಿಯವರು, ಜಿಲ್ಲಾ ಯೋಜನಾ ಸಂಘಗಳು: ವಿಶೇಷ ವಸತಿ ಶಾಲೆಗಳ ಕಾರ್ಯನಿರ್ವಹಣೆಯನ್ನು ಪರಿವೀಕ್ಷಿಸಲು ಮತ್ತು ಆ ಬಗ್ಗೆ ತಮಗೆ ವರದಿ ಸಲ್ಲಿಸುವಂತೆ ಜಿಲ್ಲೆಯ ಅಧಿಕಾರಿಗಳಿಗೆ ನಿರ್ದೇಶಿಸಬಹುದು.

2) ಪರಿವೀಕ್ಷಣೆಯ ಉದ್ದೇಶವು, ಯೋಜನೆಯು ಹೇಳಲಾದ ಉದ್ದೇಶಗಳನ್ನು ಈಡೇರುಸುವುದೆ ಮತ್ತು ಅದು ನಿಬಂಧನೆಗಳು ಹಾಗೂ ಷರತ್ತುಗಳಿಗನುಸಾರವಾಗಿ ನಡೆಯುತ್ತಿದೆಯೇ ಎಂಬುದನ್ನು ನಿರ್ಧರಿಸುವುದಾಗಿದೆ. ಯೋಜನೆಯ ಸಮಗ್ರ ಕಾರ್ಯನಿರ್ವಹಣೆಯನ್ನು ಕುರಿತು ಮಾಹಿತಿ ಪಡೆಯಲು ಯೋಜನಾ ಪರಿವೀಕ್ಷಣೆಯು ಒಂದು ಮುಖ್ಯವಾದ ಸಾಧವಾಗಿದೆ. ಇದು ತಪ್ಪು ಕಂಡು ಹಿಡಿಯುವ ಪ್ರಕ್ರಿಯೆಗಿಂತ ಸುಧಾರಿಸುವ ಒಂದು ಸಾಧನವಾಗಿದೆ. ಅದ್ದರಿಂದ, ಪರಿವೀಕ್ಷಣಾ ಅಧಿಕಾರಿಗಳು ಕಾರ್ಯಕ್ರಮ ಚಟುವಟಿಕೆಯ ಅನುಷ್ಠಾನದಲ್ಲಿ ಅಂತರ್ಗತವಾಗಿರುವಂಥ ತುಂಬಾ ಸಂಕೀರ್ಣ ಮತ್ತು ಸೂಕ್ಷ್ಮವಾದ ಸಮಸ್ಯೆಗಳ ಬಗ್ಗೆ ಸಾಕಷ್ಟು ತಿಳುವಳಿಕೆ ಹೊಂದಿರಬೇಕು ಮತ್ತು ಅವುಗಳ ಸುಧಾರಣೆಗೆ ಸಂಬಂಧಿಸಿದಂತೆ ಸೂಕ್ತವಾದ ಕ್ರಮಗಳನ್ನು ಶಿಫಾರಸ್ಸು ಮಾಡಬೇಕು. ಅಧಿಕಾರಿಯು, ವಿವಿಧ ಪರಿಮಿತಿಗಳನ್ನು ಗಮನದಲ್ಲಿಟ್ಟುಕೊಂಡು ಯೋಜನೆಯ ಕಾರ್ಯನಿರ್ವಹಣೆಯ ಬಗ್ಗೆ ಸಮಗ್ರ ನಿಲುವನ್ನು ತಳೆಯತಕ್ಕದ್ದು.. ಇದು ಪರಿವೀಕ್ಷಣೆ ನಡೆಸುವಾಗ ಮಾರ್ಗದರ್ಶಿ ತತ್ವವಾಗತಕ್ಕದ್ದು.

3) ಜಿಲ್ಲಾ ಯೋಜನಾ ಸಂಘದ ಪರಿವೀಕ್ಷಣಾ ವರದಿಯ ನಮೂನೆಯನ್ನು ಅನುಬಂಧ 'ಐ' ನಲ್ಲಿ ನೀಡಲಾಗಿದೆ ಮತ್ತು ವಿಶೇಷ ವಸತಿ ಶಾಲೆಯ ಪರಿವೀಕ್ಷಣ ವರದಿಯ ನಮೂನೆಯನ್ನು ಅನುಂಬಧ 'ಜೆ' ನಲ್ಲಿ ನೀಡಲಾಗಿದೆ.

## ಅಧ್ಯಾಯ - X

**ಇತರೆ ಇಲಾಖೆಗಳ ಪಾತ್ರ : ಸೇವೆಗಳನ್ನು ಒಮ್ಮುಖಗೊಳಿಸುವುದು:**

ಕ್ರಿಯಾ ಯೋಜನೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುವ ದೃಷ್ಟಿಯಿಂದ ಎಲ್ಲಾ ಇಲಾಖೆಗಳ ಪಾಲ್ಗೊಳ್ಳುವಿಕೆ ತೀರಾ ಅವಶ್ಯಕ. ಕ್ರಿಯಾ ಯೋಜನೆಯಲ್ಲಿ ಈ ವಿಷಯವನ್ನು ಒತ್ತಿ ಹೇಳಲಾಗಿದೆ. ಮತ್ತು ಪ್ರತಿಯೊಂದು ಇಲಾಖೆಗೆ ಜವಾಬ್ದಾರಿಯನ್ನು ನಿಗದಿಪಡಿಸಲಾಗಿದೆ. ಬಾಲ ಕಾರ್ಮಿಕ ಪದ್ಧತಿ ಸಮಸ್ಯೆಯನ್ನು ಸಮಗ್ರ ದೃಷ್ಟಿಕೋನ ಮತ್ತು ಸೇವೆಯನ್ನು ಒಮ್ಮುಖಗೊಳಿಸುವುದರ ಮೂಲಕ ನಿಭಾಯಿಸಬೇಕಾಗಿದೆ. ಅದ್ದರಿಂದ, ಕ್ರಿಯಾ ಯೋಜನೆಯಲ್ಲಿ ಸೂಚಿಸಲಾದಂತಹ ಎಲ್ಲಾ ಇಲಾಖೆಗಳು, ಕೂಡಲೇ ಅವಶ್ಯಕ ಕ್ರಮಗಳನ್ನು ಪ್ರಾರಂಭಿಸಬೇಕು. ಮಕ್ಕಳ ಕಲ್ಯಾಣಕ್ಕಾಗಿ ಇತರ ಇಲಾಖೆಗಳು ಸಲ್ಲಿಸುತ್ತಿರುವ ಸೇವೆಗಳನ್ನು ಕೆಲಸ ಮಾಡುವ ಮಕ್ಕಳಿಗೆ ವಿಸ್ತರಿಸತಕ್ಕದ್ದು.

## ಅಧ್ಯಾಯ - XI

### ಇಲ್ಲಿಯವರೆಗೆ ನೀಡಲಾದ ಸರ್ಕಾರಿ ಆದೇಶಗಳು ನಿರ್ದೇಶನಗಳು: ಸುತ್ತೋಲೆಗಳು

ಕ್ರಿಯಾ ಯೋಜನೆಯನ್ನು ಸಿದ್ಧಪಡಿಸುವುದಕ್ಕೆ ಮುಂಚೆಯೇ ಕಾರ್ಮಿಕ ಇಲಾಖೆಯು, ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳ ಅನುಷ್ಠಾನಕ್ಕಾಗಿ ಕೆಲವು ಸೂಚನೆಗಳನ್ನು ನೀಡಿದೆ ಮತ್ತು ಆ ಸೂಚನೆಗಳ ಅನುಸಾರವಾಗಿ, ಹಲವು ಇಲಾಖೆಗಳು, ಬಾಲಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮ 1986ನ್ನು ಪರಿಣಾಮಕಾರಿ ಅನುಷ್ಠಾನಗೊಳಿಸುವ ದೃಷ್ಟಿಯಿಂದ, ಅವುಗಳ ಸಂಬಂಧಪಟ್ಟ ಕ್ಷೇತ್ರ ನಿರ್ವಹಣಾಧಿಕಾರಿಗಳಿಗೆ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ನೀಡಿವೆ. ಕ್ರಿಯಾ ಯೋಜನೆ ಅನುಷ್ಠಾನ ಪ್ರಾಧಿಕಾರಿಗಳ : ಕಾರ್ಯನಿರ್ವಹಣಾ ಅಧಿಕಾರಿಗಳ ಅನುಕೂಲಕ್ಕಾಗಿ, ಹೊರಡಿಸಲಾದ ಸರ್ಕಾರಿ ಆದೇಶಗಳು: ಸುತ್ತೋಲೆಗಳು: ನಿರ್ದೇಶನಗಳನ್ನು ಸಿದ್ಧ ಉಲ್ಲೇಖಕ್ಕಾಗಿ ಲಗತ್ತಿಸಲಾಗಿದೆ. ಅವುಗಳು ಇಂತಿವೆ:

ಎ) ಸರ್ಕಾರಿ ಆದೇಶ ಸಂಖ್ಯೆ: ಎಲ್‌ಡಿ 13 ಎಲ್‌ಬಿಡಬ್ಲ್ಯು 97 (ಪಿ) ದಿನಾಂಕ:29ನೇ ಸೆಪ್ಟೆಂಬರ್ 1997.

ಈ ಸರ್ಕಾರಿ ಆದೇಶವನ್ನು ಜಿಲ್ಲಾ ಮಟ್ಟದಲ್ಲಿ ನಿಧಿ ಸ್ಥಾಪಿಸುವಂತೆ ನಿರ್ದೇಶಿಸುವ ಸರ್ವೋಚ್ಚ ನ್ಯಾಯಾಲಯದ.ತೀರ್ಪಿಗೆ ಅನುಸಾರವಾಗಿ ಹೊರಡಿಸಲಾಗಿದೆ. ಇದು ಮೂಲಭೂತವಾಗಿ, ಅಪಾಯಕಾರಿ ಕೈಗಾರಿಕೆಗಳಲ್ಲಿನ ಕೆಲಸದಿಂದ ಬಿಡುಗಡೆಯಾದ ಮಕ್ಕಳ ಪುನರ್ವಸತಿಗೆ ಅನ್ವಯಿಸುತ್ತದೆ. ಈ ಮಾರ್ಗದರ್ಶಿ ಸೂತ್ರಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದು ಅಗತ್ಯವಾಗಿದೆ. ಆದರೆ, ಈ ಸರ್ಕಾರಿ ಆದೇಶದ ಮೇರೆಗೆ ರಚಿಸಲಾದ ಸಲಹಾ ಸಮಿತಿ ಮತ್ತು ರಾಷ್ಟ್ರೀಯ ಬಾಲ ಕಾರ್ಮಿಕ ಸಮಿತಿಗಳನ್ನು ರದ್ದುಗೊಳಿಸಲಾಗಿದೆ. ಮತ್ತು 29-5-2001ನೇ ದಿನಾಂಕದ ಸಂ.ಆ.ಸಂ. ಎಲ್‌ಡಿ 54 ಸಿಎಲ್‌ಸಿ 2000 (V) ರ ಮೇರೆಗೆ ಕಾರ್ಯಕಾರಿ ಸಮಿತಿ ಮತ್ತು 29-5-2001ನೇ ದಿನಾಂಕದ ಸ.ಆ.ಸಂ. ಎಲ್‌ಡಿ 54 ಸಿಎಲ್‌ಸಿ 2000(iV)ರ ಮೇರೆಗೆ ಜಿಲ್ಲಾ ಮಟ್ಟದ ಸಲಹಾ ಸಮಿತಿ ಎಂಬ ಹೊಸ ಸಮಿತಿಗಳನ್ನು ರಚಿಸಲಾಯಿತು. ಈಗ ರಚಿಸಲಾದ ಸಲಹಾ ಸಮಿತಿಯು, ಕ್ರಿಯಾ ಯೋಜನೆ, ಎನ್‌ಸಿಎಲ್‌ಪಿ ಗಳೆರಡನ್ನು ಮತ್ತು ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಸಹ ನೋಡಿಕೊಳ್ಳುತ್ತದೆ. ಸರ್ಕಾರಿ ಆದೇಶದ ಪ್ರತಿಯನ್ನು ಅನುಬಂಧ 'ಎಫ್' ಎಂದು ಲಗತ್ತಿಸಲಾಗಿದೆ.

ಬಿ) ಸ.ಆ.ಸಂ. ಎಸ್‌ಡಬ್ಲ್ಯೂಡಿ 284 ಬಿಎಮ್‌ಎಸ್ 97 ದಿನಾಂಕ: 24-7-1999

ಸಮಾಜ ಕಲ್ಯಾಣ ಇಲಾಖೆಯು ಹೊರಡಿಸಿದ ಈ ಸರ್ಕಾರಿ ಆದೇಶವು, ಬಿಡುಗಡೆಗೊಂಡ ಬಾಲ ಕಾರ್ಮಿಕರಿಗೆ, ಕರ್ನಾಟಕ ಸರ್ಕಾರದ ಸಮಾಜ ಕಲ್ಯಾಣ ಇಲಾಖೆ, ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡಗಳು ಮತ್ತು ಅಲ್ಪಸಂಖ್ಯಾತರ ಇಲಾಖೆಗಳು ನಡೆಸುವ ವಿದ್ಯಾರ್ಥಿ ನಿಲಯಗಳಲ್ಲಿ, ಆದ್ಯತಾ ಕ್ರಮದ ಪ್ರವೇಶಕ್ಕೆ ಅವಕಾಶ ಕಲ್ಪಿಸುತ್ತದೆ. ಸರ್ಕಾರಿ ಆದೇಶದ ಪ್ರತಿಯನ್ನು ಅನುಬಂಧ 'ಕೆ' ಎಂದು ಲಗತ್ತಿಸಲಾಗಿದೆ.

ಸಿ) ದಿನಾಂಕ: 24-5-1999ರ ಸುತ್ತೋಲೆ ಸಂ ಎ4: ಕೆಎ: ಪಿಆರ್‌ಎ: ಎಸ್ III 5-96-97

ನಿರ್ದೇಶಕರು, ಪ್ರಾಥಮಿಕ ಶಿಕ್ಷಣ, ಇವರು, ಶಾಲೆಗಳಲ್ಲಿ ಬಾಲ ಕಾರ್ಮಿಕರ ದಾಖಲಾತಿಗೆ ಸಂಬಂಧಪಟ್ಟಂತೆ ಅವರ ಉಪ ನಿರ್ದೇಶಕರುಗಳಿಗೆ ಈ ಸುತ್ತೋಲೆಯನ್ನು ಹೊರಡಿಸಿದ್ದಾರೆ. ಈ ಸುತ್ತೋಲೆಯ ಪ್ರತಿಯನ್ನು ಅನುಬಂಧ 'ಎಲ್' ಎಂದು ಲಗತ್ತಿಸಲಾಗಿದೆ. ಈ ಸೂತ್ತೋಲೆಯು ಸರ್ಕಾರಿ ಶಾಲೆಗಳಿಗೆ ಮಕ್ಕಳನ್ನು ದಾಖಲು ಮಾಡುವಲ್ಲಿ ಕ್ರಿಯಾ ಯೋಜನೆ ಅನುಷ್ಠಾನ ಪ್ರಾಧಿಕಾರಿಗಳಿಗೆ ಅವಕಾಶ ಕಲ್ಪಿಸುತ್ತದೆ.

ಡಿ) ಸುತ್ತೋಲೆ ಸಂ. ಎಸ್‌ಎಮ್‌ಎಸ್ (1) 15:96-97, ದಿನಾಂಕ: 17.6.2000

ಪೋಲೀಸ್ ಡೈರೆಕ್ಟರ್ ಜನರಲ್ ಮತ್ತು ಇನ್‌ಸ್ಪೆಕ್ಟರ್ ಜನರಲ್ ಅವರು ಈ ಸುತ್ತೋಲೆಯನ್ನು ಹೊರಡಿಸಿದ್ದಾರೆ. ಕಾರ್ಮಿಕ ಇಲಾಖೆಯ ಅಧಿಕಾರಿಗಳು: ಸಿಬ್ಬಂದಿ ಮತ್ತು ಸ್ವಯಂ ಸೇವಾ ಸಂಘ ಸಂಸ್ಥೆಗಳ

ಕಾರ್ಯಕರ್ತರು ಬಾಲ ಕಾರ್ಮಿಕರನ್ನು ಗುರುತಿಸುವುದಕ್ಕಾಗಿ ದಾಳಿ ನಡೆಸುವಾಗಲೆಲ್ಲ ಮತ್ತು ಅವರುಗಳ ಪುನರ್ವಸತಿ ಕೇಂದ್ರಗಳು ಮುಂತಾದವುಗಳಿಗೆ ಭೇಟಿ ನೀಡುವ ಸಮಯದಲ್ಲಿ ಅವರಿಗೆ ಅವಶ್ಯಕ ಪೋಲೀಸ್ ಭದ್ರತೆಯನ್ನು ಒದಗಿಸುವಂತೆ ಪೋಲೀಸ್ ಅಧಿಕಾರಿಗಳಿಗೆ ಅದರಲ್ಲಿ ಸೂಚಿಸಲಾಗಿದೆ. ಈ ಸುತ್ತೋಲೆಯು, ಕ್ರಿಯಾ ಯೋಜನೆಯ ಕಾರ್ಯನಿರ್ವಹಣಾಧಿಕಾರಿಗಳು ಅಗತ್ಯವಾದಗಲೆಲ್ಲಾ ಪೋಲೀಸ್ ರಕ್ಷಣೆಯನ್ನು ಕೋರುವುದಕ್ಕೆ ಅವಕಾಶ ಕಲ್ಪಿಸುತ್ತದೆ ಮತ್ತು ಪೋಲೀಸ್ ಅಧಿಕಾರಿಗಳು ಆ ಕೋರಿಕೆಯನ್ನು ಮಾನ್ಯ ಮಾಡಬೇಕು. ಈ ಸುತ್ತೋಲೆಯ ಪ್ರತಿಯನ್ನು ಅನುಬಂಧ - 'ಎಮ್' ಎಂದು ಲಗತ್ತಿಸಲಾಗಿದೆ.

ಇ) ಸುತ್ತೋಲೆ ಸಂ. ಹೆಚ್ಎಫ್ಡಬ್ಲ್ಯೂ 24 ಎಸ್ಎಮ್ಎಮ್ 97, ದಿನಾಂಕ: 8-1-2001

ಬಾಲ ಕಾರ್ಮಿಕರ ಸಂಬಂಧದಲ್ಲಿ, ಸೂಕ್ತ ವೈದ್ಯಕೀಯ ಪ್ರಾಧಿಕಾರಿಯು ವಯಸ್ಸಿನ ಆಧಾರದ ಬಗ್ಗೆ ಪ್ರಮಾಣಪತ್ರ ನೀಡುವ ಬಗ್ಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಈ ಸುತ್ತೋಲೆ ಮೇರೆಗೆ ಸೂಚನೆಗಳನ್ನು ನೀಡಿದೆ. ಈ ಸುತ್ತೋಲೆಯ ಮೇರೆಗೆ, ಜಿಲ್ಲಾ ಆಸ್ಪತ್ರೆಯ ಸಹಾಯಕ ಶಸ್ತ್ರ ಚಿಕಿತ್ಸಕ (ಸರ್ಜನ್)ನ ದರ್ಜೆಗಿಂತ ಕಡಿಮೆ ದರ್ಜೆಯವರಅಲ್ಲದ ಸರ್ಕಾರಿ ವೈದ್ಯಾಧಿಕಾರಿಗಳು ಅಥವಾ ಯಾವುದೇ ಸರ್ಕಾರಿ ಆಸ್ಪತ್ರೆ ಅಥವಾ ಇಎಸ್ಐ ಆಸ್ಪತ್ರೆ ಅಥವಾ ಔಷಧಾಲಯದಲ್ಲಿನ ಸಮಾನ ದರ್ಜೆಯ ವೈದ್ಯಾಧಿಕಾರಿಗಳು ವಯಸ್ಸಿನ ಆಧಾರದ ಬಗ್ಗೆ ಪ್ರಮಾಣ ಪತ್ರವನ್ನು ಕೊಡುವಂತೆ ಅವರನ್ನು ಅಗತ್ಯಪಡಿಸಿದಾಗಲೆಲ್ಲ ಅವರು ಹಾಗೆ ಕೊಡಬೇಕು. ಸುತ್ತೋಲೊಯ ಪ್ರತಿಯನ್ನು ಅನುಬಂಧ - 'ಎನ್' ಎಂದು ಲಗತ್ತಿಸಲಾಗಿದೆ.

ಎಫ್) ಸರ್ಕಾರಿ ಅಧಿಸೂಚನೆ ಸಂ. ಡಿಪಿಎಆರ್ 3 ಎಸ್ಆರ್ಸಿ 97 ದಿನಾಂಕ: 11.11.1997

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು, ಮೇಲಿನ ಅಧಿಸೂಚನೆಯಲ್ಲಿ ಗೃಹ ಕೃತ್ಯಗಳಿಗಾಗಿ 14 ಕ್ಕಿಂತ ಕಡಿಮೆ ವಯಸ್ಸಿನ ಯಾವುದೇ ಮಕ್ಕಳನ್ನು ಸರ್ಕಾರಿ ನೌಕರರು ಕೆಲಸಕ್ಕಿಟ್ಟುಕೊಳ್ಳುವುದನ್ನು ನಿಷೇದಿಸುತ್ತದೆ. ಈ ಅಧಿಸೂಚನೆಯು, 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳ ಸರ್ಕಾರಿ ನೌಕರರೊಂದಿಗೆ ಕಲಸ ಮಾಡುವುದನ್ನು ಪ್ರತಿಬಂಧಿಸಲು ಪ್ರಾಧಿಕಾರಿಗಳಿಗೆ ಸಹಾಯಕವಾಗುತ್ತದೆ ಮತ್ತು ಗೃಹಕೃತ್ಯಗಳಿಗಾಗಿ 14 ವರ್ಷದೊಳಗಿನ ಮಕ್ಕಳನ್ನು ಸರ್ಕಾರಿ ನೌಕರರು ಕೆಲಸಕ್ಕಿಟ್ಟುಕೊಂಡಿರುವುದು ಕಂಡುಬಂದಲ್ಲಿ ಅವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಬೇಕು. ಈ ಅಧಿಸೂಚನೆಯ ಪ್ರತಿಯನ್ನು ಅನುಬಂಧ 'ಒ' ಎಂದು ಲಗತ್ತಿಸಲಾಗಿದೆ.

(ಜಿ) ಡಿ.ಒ.ಸಂ. ಅಭಿವೃದ್ಧಿ :234:99-2000 ದಿನಾಂಕ: 8.9.2000

ನಿರ್ದೇಶಕರು, ನೌಕರರ ರಾಜ್ಯ ವಿಮಾ ಯೋಜನೆ ಇವರು, ಮೇಲೆ ಉಲ್ಲೇಖಿಸಲಾಧ್ಧ ತಮ್ಮ ಪತ್ರದಲ್ಲಿ ರಾಜ್ಯದಲ್ಲಿನ ಇಎಸ್ಐ ಆಸ್ಪತ್ರೆಗಳ ಎಲ್ಲಾ ವೈದ್ಯಕೀಯ ಸೂಪರಿಂಟೆಂಡೆಂಟರುಗಳಿಗೆ ಮತ್ತು ಆಡಳಿತಾತ್ಮಕ ವೈದ್ಯಕೀಯ ವಿಮಾ ವೈದ್ಯರುಗಳಿಗೆ ಬಾಲ ಕಾರ್ಮಿಕರನ್ನು ಪತ್ತೆ ಹಚ್ಚುವುದಕ್ಕಾಗಿ ದಾಳಿಯನ್ನು ನಡೆಸುವಾಗ ಮತ್ತು ಅವರಿಗೆ ಉಲ್ಲೇಖಿಸುವ ಬಾಲ ಕಾರ್ಮಿಕರ ವಯಸ್ಸಿನ ಬಗ್ಗೆ ಪ್ರಮಾಣಪತ್ರ ನೀಡುವ ಪ್ರಕರಣಗಳಲ್ಲಿ ಪರಿಶೀಲನಾ ಪ್ರಾಧಿಕಾರಿಗಳೊಂದಿಗೆ ಸಹಕರಿಸುವಂತೆ ಸೂಚಿಸಲಾಗಿದೆ. ಈ ಸೂಚನೆಗಳು, ರಕ್ಷಿತ ಮಕ್ಕಳ ವಯಸ್ಸಿನ ಪ್ರಮಾಣಪತ್ರವನ್ನು ಸುಲಭವಾಗಿ ಮತ್ತು ಶೀಘ್ರವಾಗಿ ಪಡೆಯುವುದಕ್ಕೆ ಪ್ರಾಧಿಕಾರಿಗಳಿಗೆ ಸಹಾಯಕವಾಗುವುದು. ಪತ್ರದ ಪ್ರತಿಯನ್ನು ಅನುಬಂಧ 'ಪಿ' ಎಂದು ಲಗತ್ತಿಸಲಾಗಿದೆ.

## ಅಧ್ಯಾಯ - XII

### ಜಾಗೃತಿ ಮೂಡಿಸುವುದು ಮತ್ತು ವರದಿ ಮಾಡುವುದು:

### ಎ. ಜಾಗೃತಿ ಮೂಡಿಸುವುದು:

1) ರಾಜ್ಯ ಮಟ್ಟದಲ್ಲಿ, ಹಿತಾಸಕ್ತಿದಾರರಿಗೆ ಜಾಗೃತಿ ಮೂಡಿಸುವುದು ಮತ್ತು ತಿಳುವಳಿಕೆ ನೀಡುವ ಕಾರ್ಯವನ್ನು ಎಲ್ಲಾ ಅಗತ್ಯ ಹಣಕಾಸು ನೆರವಿನೊಂದಿಗೆ ವಾರ್ತಾ ಮತ್ತು ಪ್ರಚಾರ ನಿರ್ದೇಶನಾಲಯಕ್ಕೆ ವಹಿಸಿಕೊಡಲಾಗಿದೆ. ಅವರು, ಸಂದೇಶವನ್ನು ಹರಡುವುದಕ್ಕೆ ಜಿಲ್ಲಾ ವಾರ್ತಾ ಮತ್ತು ಪ್ರಚಾರ ಇಲಾಖೆಯ ಅಧಿಕಾರಿಗಳಿಗೆ ಸಾಮಗ್ರಿಗಳನ್ನು ಪೂರೈಸುವುದು.

2) ಜಿಲ್ಲಾ ಯೋಜನಾ ಸಂಘಗಳು, ಜಿಲ್ಲೆಯಲ್ಲಿ ವಾರ್ತಾ ಮತ್ತು ಪ್ರಚಾರ ನಿರ್ದೇಶನಾಲಯವು ಕೈಕೊಂಡ ಪ್ರಚಾರ ಮತ್ತು ಜಾಗೃತಿ ಆಂದೋಲನದ ಸೂಕ್ತ ಅನುಷ್ಠಾನದ ಮೇಲ್ವಿಚಾರಣೆ ನಡೆಸತಕ್ಕದ್ದು.

3) ಜಿಲ್ಲಾ ಮಟ್ಟದಲ್ಲಿ, ಜಿಲ್ಲಾ ಯೋಜನಾ ಸಂಘಗಳು, ವಿವಿಧ ಹಂತಗಳಲ್ಲಿ ಸಾಮೂಹಿಕ ಸಮುದಾಯ ಜಾಗೃತಿ ಕಾರ್ಯಕ್ರಮಗಳನ್ನು ಸಂಘಟಿಸತಕ್ಕದ್ದು. ಮಕ್ಕಳನ್ನು ನಿಯೋಜಿಸಿಕೊಳ್ಳುವ ಪದ್ಧತಿಯ ಕೆಡಕಿನ ಬಗ್ಗೆ ಮತ್ತು ಯೋಜನೆಯ ಉದ್ದೇಶಗಳ ಬಗ್ಗೆ ಸಹ ಜನರಲ್ಲಿ ಸ್ಪಷ್ಟವಾಗಿ ತಿಳುವಳಿಕೆ ನೀಡತಕ್ಕದ್ದು. ಹಾಗೆ ಮಾಡುವಾಗ, ಸಮಾಜದ ಯಾವುದೇ ವರ್ಗದ ಭಾವನೆಗಳಿಗೆ ಸಂದೇಶಗಳು ನೋವುಂಟು ಮಾಡುವಂತಿದ್ದರೆ, ಅವುಗಳನ್ನು ಬಿಟ್ಟುಬಿಡತಕ್ಕದ್ದು, ಆಂದೋಲನದ ಪರಿಣಾಮ ಮತ್ತು ಫಲಿತಾಂಶಗಳ ಬಗ್ಗೆ ಕಾರ್ಮಿಕ ಕಮೀಷನರಿಗೆ ನಿಯತ ವರದಿಗಳನ್ನು ಕಳುಹಿಸಬೇಕು ಮತ್ತು ಕಾರ್ಮಿಕ ಕಮೀಷನರರು ಸರ್ಕಾರಕ್ಕೆ ವರದಿ ಮಾಡುವುದು.

### ಬಿ. ವರದಿ ಮಾಡುವುದು:

ಕ್ರಿಯಾ ಯೋಜನೆ ಉದ್ದೇಶವು, ಕ್ರಿಯಾ ಯೋಜನೆಯ ಕಾರ್ಯಕ್ರಮಗಳ ಕಾರ್ಯ ನಿರ್ವಹಣೆಯ ಬಗ್ಗೆ ವ್ಯವಸ್ಥಿತವಾಗಿ ಮಾಹಿತಿ ಒದಗಿಸುವುದಾಗಿದೆ. ಈ ಮಾರ್ಗದರ್ಶಿ ಸೂತ್ರಗಳಲ್ಲಿ, ಹಲವಾರು ವರದಿ ಮಾಡುವ ವ್ಯವಸ್ಥೆಗಳು ಸೇರಿಕೊಂಡಿವೆ. ಆದರೆ, ಕ್ಷೇತ್ರ ಸಂಸ್ಥೆಗಳಿಂದ ಮಾಹಿತಿಯನ್ನು ಪಡೆಯುವುದಕ್ಕೆ ಇನ್ನೂ ಕೆಲವು ನಮೂನೆಗಳನ್ನು ರೂಪಿಸಲಾಗಿದೆ. ಆದರೆ ಅವುಗಳನ್ನು ಮಾರ್ಗದರ್ಶಿ ಸೂತ್ರಗಳಲ್ಲಿ ಎಲ್ಲಿಯೂ ಉಲ್ಲೇಖಿಸಿಲ್ಲ, ಆದ್ದರಿಂದ ಅವುಗಳನ್ನು ಈ ಮುಂದಿನಂತೆ ಅನುಬಂಧಿಸಲಾಗಿದೆ.

### 1. ಎನ್‌ಸಿಎಲ್‌ಪಿಯೇತರ ಜಿಲ್ಲೆಗಳಿಗಾಗಿ ಬಳಕೆ ಪ್ರಮಾಣ ಪತ್ರ:

ಜಿಲ್ಲಾಧಿಕಾರಿಗಳು ಮತ್ತು ಯೋಜನಾ ಸಂಘದ ಅಧ್ಯಕ್ಷರು, ಯಾವ ಉದ್ದೇಶಕ್ಕಾಗಿ ನಿಧಿಗಳನ್ನು ಬಿಡುಗಡೆ ಮಾಡಲಾಗಿದೆಯೋ ಆ ಉದ್ದೇಶಕ್ಕಾಗಿ ಸಂಘವು ಸ್ವೀಕರಿಸಿದ ನಿಧಿಗಳನ್ನು ಬಳಸಿಕೊಂಡ ಬಗ್ಗೆ ಕಾರ್ಮಿಕ ಆಯುಕ್ತರಿಗೆ, ಅನುಬಂಧ 'ಕ್ಯೂ' ನಲ್ಲಿ ತೋರಿಸಲಾದಂಥ ಗೊತ್ತುಪಡಿಸಲಾದ ನಮೂನೆಯಲ್ಲಿ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

### 2. ಎನ್‌ಸಿಎಲ್‌ಪಿ ಜಿಲ್ಲೆಗಳಿಗಾಗಿ ಬಳಕೆ ಪ್ರಮಾಣ ಪತ್ರ:

ಜಿಲ್ಲಾಧಿಕಾರಿಗಳು ಮತ್ತು ಯೋಜನಾ ಸಂಘದ ಅಧ್ಯಕ್ಷರು ಕಾರ್ಮಿಕ ಆಯುಕ್ತರಿಗೆ, ಭಾರತ ಸರ್ಕಾರಕ್ಕೆ ಕಳುಹಿಸಬೇಕಾದ ಬಳಕೆ ಪ್ರಮಾಣ ಪತ್ರದ ಜೊತೆಗೆ ಎನ್‌ಪಿಎಲ್‌ಸಿ ಪುನರ್ವಸತಿ ಕೇಂದ್ರಗಳಿಗೆ, ರಾಜ್ಯದ ನಿಧಿಯಿಂದ ವಸತಿ ಸೌಕರ್ಯವನ್ನು ಒದಗಿಸುವ ಉದ್ದೇಶಕ್ಕಾಗಿ, ಸಂಘವು ಸ್ವೀಕರಿಸಿದ ನಿಧಿಗಳ ಬಳಕೆ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ನಮೂನೆಗಾಗಿ ಅನುಬಂಧ ಕ್ಯೂ/ ನ್ನು ನೋಡಿ.

3. ಆದಾಯ ಮತ್ತು ವೆಚ್ಚದ ವಿವರ ಪಟ್ಟಿ:

ಜಿಲ್ಲಾ ಯೋಜನಾ ಸಂಘವು, ಅನುಬಂಧ 'ಆರ್' ಎಂದು ಲಗತ್ತಿಸಲಾದ ನಮೂನೆಯಲ್ಲಿ, ಆದಾಯ ಮತ್ತು ವೆಚ್ಚದ ವಿವರ ಪಟ್ಟಿಯನ್ನು ತಯಾರಿಸಿ ಕಾರ್ಮಿಕ ಆಯುಕ್ತರ ಮೂಲಕ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ವಿಶೇಷ ವಸತಿ ಶಾಲೆಗಳ ಕಾರ್ಯ ನಿರ್ವಹಣೆ ಕುರಿತು ಅರ್ಧ ವಾರ್ಷಿಕ ಪ್ರಗತಿ ವರದಿ:

ಜಿಲ್ಲಾ ಯೋಜನಾ ಸಂಘವು, ಅನುಬಂಧ 'ಎಸ್' ಎಂದು ಲಗತ್ತಿಸಲಾದ ನಮೂನೆಯಲ್ಲಿ ವಿಶೇಷ ವಸತಿ ಶಾಲೆಯ ಕಾರ್ಯ ನಿರ್ವಹಣೆಯ ಬಗ್ಗೆ ಅರ್ಧ ವಾರ್ಷಿಕ ಪ್ರಗತಿಯ ವರದಿಯನ್ನು ತಯಾರಿಸಿ ಕಾರ್ಮಿಕ ಆಯುಕ್ತರ ಮೂಲಕ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5. ವಿಶೇಷ ವಸತಿ ಶಾಲೆಗಳ ಕಾರ್ಯ ನಿರ್ವಹಣೆ ಬಗ್ಗೆ ವಾರ್ಷಿಕ ಪ್ರಗತಿಯ ವರದಿ:

ಜಿಲ್ಲಾ ಯೋಜನಾ ಸಂಘವು, ಅನುಬಂಧ - ಎಸ್ 1 ಎಂದು ಲಗತ್ತಿಸಲಾದ ನಮೂನೆಯಲ್ಲಿ, ವಿಶೇಷ ವಸತಿ ಶಾಲೆಗಳ ಕಾರ್ಯ ನಿರ್ವಹಣೆಯ ಬಗ್ಗೆ ವಾರ್ಷಿಕ ಪ್ರಗತಿ ವರದಿಯನ್ನು ತಯಾರಿಸಿ ಕಾರ್ಮಿಕ ಆಯುಕ್ತರ ಮೂಲಕ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

6. ಸರ್ವೋಚ್ಚ ನ್ಯಾಯಾಲಯದ ನಿವೇಶನಗಳ ಅನುಷ್ಠಾನ ಕುರಿತು ತ್ರೈಮಾಸಿಕ ಸ್ಥಿತಿ ವಿವರಣಾ ವರದಿ:

ಜಿಲ್ಲೆಯ ಜಿಲ್ಲಾಧಿಕಾರಿಗಳು, ಅನುಬಂಧ 'ಐ' ಎಂದು ಲಗತ್ತಿಸಲಾದ ನಮೂನೆಯಲ್ಲಿ, ಸರ್ವೋಚ್ಚ ನ್ಯಾಯಾಲಯದ ನಿದೇಶನಗಳ ಅನುಷ್ಠಾನದ ಬಗ್ಗೆ ತ್ರೈಮಾಸಿಕ ಸ್ಥಿತಿ ವಿವರಣಾ ವರದಿಯನ್ನು ತಯಾರಿಸಿ ಕಾರ್ಮಿಕ ಆಯುಕ್ತರ ಮೂಲಕ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

7. ಎನ್‌ಸಿಎಲ್‌ಪಿ ಯೇತರ ಜಿಲ್ಲೆಗಳಿಗೆ ಯೋಜನಾ ಸಂಘದ ಆಯವ್ಯಯ:

ಯೋಜನಾ ಸಂಘವು, ಅನುಬಂಧ 'ಯು' ಎಂದು ಲಗತ್ತಿಸಲಾದ ಮಾದರಿಯಲ್ಲಿ ಯೋಜನಾ ಸಂಘದ ವಾರ್ಷಿಕ ಅಯವ್ಯಯವನ್ನು ತಯಾರಿಸತಕ್ಕದ್ದು.

8. ಸಮೀಕ್ಷೆ ಮತ್ತು ತರಬೇತಿಗಾಗಿ ಆಯವ್ಯಯದ ಪ್ರಮಾಣ:

ಸಮೀಕ್ಷೆ ಮತ್ತು ತರಬೇತಿ ಬಗ್ಗೆ ಭರಿಸಲಾಗುವ ಅಯವ್ಯಯದ ಪ್ರಮಾಣದ ವಿವರಗಳನ್ನು ಅನುಬಂಧ - "ವಿ" ರಲ್ಲಿ ನೀಡಲಾಗಿದೆ.

9. ಕರ್ನಾಟಕದಲ್ಲಿ ಶಾಲೆಯಿಂದ ಹೊರಗುಳಿದ ಮಕ್ಕಳ ಜಿಲ್ಲಾವಾರು ಅಂಕಿ ಅಂಶಗಳು:

ಅಂಶಗಳು:-

ಶಿಕ್ಷಣ ಇಲಾಖೆಯು, 2001ರ ಜನವರಿ ಮತ್ತು ಫೆಬ್ರವರಿಯಲ್ಲಿ, ಮನೆಮನೆಯ ಸಮೀಕ್ಷೆ ನಡೆಸಿತು ಮತ್ತು ಸಮೀಕ್ಷೆಯ ಅವಧಿಯಲ್ಲಿ ಕಂಡು ಬಂದ 6-14 ವರ್ಷದೊಳಗಿನ ಶಾಲೆಯಿಂದ ಹೊರಗುಳಿದ ಮಕ್ಕಳ ಕ್ರೋಢೀಕೃತ ಜಿಲ್ಲಾವಾರು ಅಂಕಿ ಅಂಶಗಳನ್ನು ಸಿದ್ಧಪಡಿಸಿದ್ದು ಸದರಿ ವಿವರಗಳನ್ನು ಅನುಬಂಧ 'ಡಬ್ಲ್ಯೂ' ನಲ್ಲಿ ನೀಡಲಾಗಿದೆ.

------

**ಬುಳ್ಳಾ ಸುಬ್ಬರಾವ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ.

ಅನುಬಂಧ - ಎ1

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನೆಗಾಗಿ ಕ್ರಿಯಾ ಯೋಜನೆ - ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಉನ್ನತಾಧಿಕಾರ ಸಮಿತಿಯ ರಚನೆ ಕುರಿತು.

### ಪ್ರಸ್ತಾವನೆ

ಭಾರತ ಸಂವಿಧಾನವು, ರಾಜ್ಯ ನೀತಿ ನಿರ್ದೇಶಕ ತತ್ವಗಳು' ಮತ್ತು 'ಮೂಲಭೂತ ಹಕ್ಕುಗಳು' ಇವೆರಡರಲ್ಲೂ ಈ ಮುಂದಿನಂತೆ ಹೇಳಿದೆ:

1) "ರಾಜ್ಯವು ಕೆಲಸಗಾರರು, ಪುರುಷರು ಮತ್ತು ಸ್ತ್ರೀಯರು ಆರೋಗ್ಯ ಮತ್ತು ಸಾಮರ್ಥ್ಯ ಪಡೆಯುವುದಕ್ಕೆ ಹಾಗೂ ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ದುರುಪಯೋಗಪಡಿಸಿಕೊಳ್ಳದಿರುವಂತೆ ನಾಗರಿಕರನ್ನು ಆರ್ಥಿಕ ಸ್ಥಿತಿಯ ಹಿನ್ನೆಲೆಯಲ್ಲಿ ಅವರ ವಯಸ್ಸು ಹಾಗೂ ಶರೀರ ಸಾಮರ್ಥ್ಯಕ್ಕೆ ಸೂಕ್ತವಲ್ಲದ ವೃತ್ತಿಗಳನ್ನು ಕೈಗೊಳ್ಳುವಂತೆ ಒತ್ತಾಯಿಸದಂತೆ ಮತ್ತು ವಿಶೇಷವಾಗಿ ಮಕ್ಕಳಿಗೆ ಆರೋಗ್ಯಕರವಾದ ರೀತಿಯಲ್ಲಿ ಮತ್ತು ಸ್ವಾತಂತ್ರ ಹಾಗೂ ಘನತೆಯ ಪರಿಸರಗಳಲ್ಲಿ ವಿಕಸನಗೊಳ್ಳುವಂತೆ ಅವಕಾಶಗಳನ್ನು ಮತ್ತು ಸೌಲಭ್ಯಗಳನ್ನು ಕಲ್ಪಿಸುವಂತೆ ತನ್ನ ನೀತಿಯನ್ನು ನಿರ್ದೇಶಿಸತಕ್ಕದ್ದು. ಬಾಲಕರು ಮತ್ತು ಯುವಕರನ್ನು ಶೋಷಣೆಯಿಂದ ಸಂರಕ್ಷಿಸುವುದು ಮತ್ತು 14 ವರ್ಷಗಳಿಂದ ಕಡಿಮೆ ವಯಸ್ಸಿನ ಯಾವುದೇ ಮಗುವು ಯಾವುದೇ ಇತರ ಅಪಾಯಕಾರಿ ಉದ್ಯೋಗದಲ್ಲಿ ಕೆಲಸ ಮಾಡತಕ್ಕದ್ದಲ್ಲ.

2) ಭಾರತ ಸರ್ಕಾರ ಸಹ, ಮಕ್ಕಳ ಹಕ್ಕುಗಳ ಕುರಿತ ಒಡಂಬಡಿಕೆಗಳನ್ನು ಒಪ್ಪಿಕೊಂಡಿದೆ. ಒಡಂಬಂಡಿಕೆಯು, ಮಕ್ಕಳ ಹಕ್ಕಿಗೆ ಸಂಬಂಧಿಸಿದಂತೆ ವಿಶೇಷ ರಕ್ಷಣೆ ಅಗತ್ಯವೆಂಬುದನ್ನು ಸ್ವೀಕರಿಸುತ್ತದೆ ಮತ್ತು ಅದರ ಗುರಿಯು ಅಂತಹ ರಕ್ಷಣೆಯನ್ನು ಒದಗಿಸುವುದು ಮಾತ್ರವಲ್ಲದೆ ಪ್ರಪಂಚದಾದ್ಯಂತ ಸ್ವಂತ ಮಕ್ಕಳ ಸ್ಥಿತಿಯಲ್ಲಿ ನಿರಂತರ ಸುಧಾರಣೆ ಹಾಗೂ ಶಾಂತಿ ಮತ್ತು ಭದ್ರತೆಯ ವಾತಾವರಣದಲ್ಲಿ ಅವರ ಅಭಿವೃದ್ಧಿ ಮತ್ತು ಶಿಕ್ಷಣ ಕ್ರಮದಲ್ಲಿ ಸುಧಾರಣೆ ಸುನಿಶ್ಚಿತಗೊಳಿಸುವುದಾಗಿದೆ.

3) ಹಲವಾರು ಶಾಸನಗಳನ್ನು ಅಧಿನಿಯಮಿಸಲಾಗಿದೆ ಮತ್ತು ಭಾರತ ಸರ್ಕಾರ ಮತ್ತು ಕರ್ನಾಟಕ ಸರ್ಕಾರ ಹಾಗೂ ನ್ಯಾಯಾಲಯಗಳು ಹಲವಾರು ಸೂಚನೆಗಳನ್ನು ಹೊರಡಿಸಿವೆ ಮತ್ತು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು, ಕೆಲಸ ಮಾಡುವ ಮಕ್ಕಳ ಬಗ್ಗೆ ಕಾಳಜಿಯನ್ನು ತೋರಿಸಿವೆ. ಆದರೆ ಕಾನೂನನ್ನು ಅನುಷ್ಠಾನಗೊಳಿಸುವುದಕ್ಕೆ ಯಾವುದೇ ನಿರ್ದಿಷ್ಟ ಕಾರ್ಯಕ್ರಮ ಅಥವಾ ಕ್ರಿಯಾ ಯೋಜನೆ ಇಲ್ಲ.

4) ಬಾಲ ಕಾರ್ಮಿಕ ಸಮಸ್ಯೆ ಯಾವುದೇ ನಿದಿಷ್ಟ ಕೈಗಾರಿಕೆ ಅಥವಾ ವೃತ್ತಿಗೆ ಸೀಮಿತವಾಗಿಲ್ಲದಿರುವುದರಿಂದ ಬಾಲ ಕಾರ್ಮಿಕ, ಸಮಸ್ಯೆಯ ನಿರ್ಮೂಲನೆಗೆ ರಾಜ್ಯದ ವತಿಯಿಂದ ವ್ಯಾಪಕ ಯತ್ನ ಅಗತ್ಯವಾಗಿದೆ ಮತ್ತು ಇದನ್ನು ಕಾರ್ಮಿಕ ಇಲಾಖೆಯೊಂದೇ ನಿರ್ವಹಿಸಲಿಕ್ಕಾಗದು, ಆದ್ದರಿಂದ, ಕರ್ನಾಟಕ ರಾಜ್ಯದಲ್ಲಿ ಬಾಲ ಕಾರ್ಮಿಕ ಪದ್ಧತಿಯ ಕೆಡುಕುಗಳ ನಿರ್ಮೂಲನೆಗಾಗಿ ವ್ಯಾಪಕ ಕ್ರಿಯಾ ಯೋಜನೆ ಅಗತ್ಯವಾಗಿದೆ. ಆದ್ದರಿಂದ ಇಲಾಖೆಯು, ಬಾಲ ಕಾರ್ಮಿಕ ಸಮಸ್ಯೆಯನ್ನು ನಿಭಾಯಿಸಲು ಹಲವಾರು ಇಲಾಖೆಗಳು, ಜಿಲ್ಲಾಡಳಿತಗಳು ಪಂಚಾಯತ್ ರಾಜ್ ಸಂಸ್ಥೆಗಳು, ನಗರಪಾಲಿಕೆಗಳು, ಸ್ವಯಂ ಸೇವಾ ಸಂಸ್ಥೆಗಳು, ಮಹಿಳಾ ಸಂಘ ಸಂಸ್ಥೆಗಳು, ಯುವಕ ಸಂಘಗಳು ಮತ್ತು ಕಾರ್ಮಿಕ ಸಂಘಗಳು ಮುಂತಾದವುಗಳ ಪಾಲ್ಗೊಳ್ಳುವಿಕೆಯೊಂದಿಗೆ ಸಮಗ್ರ ಅಭಿಗಮನ ಕ್ರಿಯಾ ಯೋಜನೆಯನ್ನು ಸಿದ್ಧಗೊಳಿಸಿದೆ.

5) ರಾಜ್ಯವು, ಬಾಲ ಕಾರ್ಮಿಕ ಮುಕ್ತ ರಾಜ್ಯವಾಗಿ' ಹೊರ ಹೊಮ್ಮುವಂತೆ ನೋಡಿಕೊಳ್ಳುವುದು ಕ್ರಿಯಾ ಯೋಜನೆಯ ಮಹತ್ವಾಕಾಂಕ್ಷೆಯಾಗಿದೆ ಮತ್ತು 14 ವರ್ಷದೊಳಗಿನ ಯಾವುದೇ ಮಗುವು ಮಜೂರಿಗಾಗಿ ಜೀವನೋಪಾಯಕ್ಕಾಗಿ ಕೆಲಸ ಮಾಡದಂತೆ ನೋಡಿಕೊಳ್ಳುವುದು" ಕ್ರಿಯ ಯೋಜನೆಯ ಉದ್ದೇಶವಾಗಿದೆ. ಕ್ರಿಯಾ ಯೋಜನೆಯು, ಗೊತ್ತುಪಡಿಸಲಾದ ಗುರಿಗಳನ್ನು ಸಾಧಿಸುವುದಕ್ಕಾಗಿ ಆರು ವರ್ಷಗಳ ಕಾಲಬದ್ಧ ಯೋಜನೆಯನ್ನು ರೂಪಿಸಿದೆ.

6) ಕ್ರಿಯಾ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ದೃಷ್ಟಿಯಿಂದ ಮಾನ್ಯ ಮುಖ್ಯಮಂತ್ರಿಗಳು ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಉನ್ನತಾಧಿಕಾರದ ಸಮಿತಿಯನ್ನು ರಚಿಸಲು ಪ್ರಸ್ತಾವಿಸಲಾಯಿತು. ಆದ್ದರಿಂದ ಆ ಸಂಬಂಧದಲ್ಲಿ ಈ ಆದೇಶ ಹೊರಡಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ ಎಲ್‌ಡಿ 54 ಸಿಎಲ್‌ಸಿ 2000 (1) ಬೆಂಗಳೂರು, ದಿನಾಂಕ 29ನೇ ಮೇ 2001**

1) ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ, ಸರ್ಕಾರವು, ಈ ಮುಂದಿನಂತೆ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಉನ್ನತಾಧಿಕಾರದ ಸಮಿತಿಯನ್ನು ರಚಿಸಲು ಉದ್ದೇಶಿಸಿದೆ:

| | |
|---|---|
| 1. ಮುಖ್ಯಮಂತ್ರಿಗಳು | ಅಧ್ಯಕ್ಷರು |
| 2. ಗೃಹ ಸಚಿವರು | ಉಪಾಧ್ಯಕ್ಷರು |
| 3. ಹಣಕಾಸು ಸಚಿವರು | ಸದಸ್ಯರು |
| 4. ಕಾರ್ಮಿಕ ಸಚಿವರು | ಸದಸ್ಯರು |
| 5. ಕಂದಾಯ ಸಚಿವರು | ಸದಸ್ಯರು |
| 6. ಗ್ರಾ. ಅ. ಪಂ.ರಾ. ಸಚಿವರು | ಸದಸ್ಯರು |
| 7. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವರು | ಸದಸ್ಯರು |
| 8. ಸಮಾಜ ಕಲ್ಯಾಣ ಸಚಿವರು | ಸದಸ್ಯರು |
| 9. ನಗರಾಭಿವೃದ್ಧಿ ಸಚಿವರು | ಸದಸ್ಯರು |
| 10. ಪ್ರಾಥಮಿಕ ಶಿಕ್ಷಣ ಸಚಿವರು | ಸದಸ್ಯರು |
| 11. ಕೃಷಿ ಸಚಿವರು | ಸದಸ್ಯರು |
| 12. ಆರೋಗ್ಯ ಸಚಿವರು | ಸದಸ್ಯರು |
| 13. ವಾರ್ತಾ ಸಚಿವರು | ಸದಸ್ಯರು |
| 14. ಉಪಾಧ್ಯಕ್ಷರು, ರಾಜ್ಯ ಯೋಜನಾ ಮಂಡಳಿ | ಸದಸ್ಯರು |
| 15. ಅಪರ ಮುಖ್ಯ ಕಾರ್ಯದರ್ಶಿ | ಸದಸ್ಯರು |
| 16. ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ | ಸದಸ್ಯ ಕಾರ್ಯದರ್ಶಿ |

2) ರಾಜ್ಯ ಮಟ್ಟದ ಉನ್ನತಾಧಿಕಾರ ಸಮಿತಿಯು ಬಾಲಕಾರ್ಮಿಕ ಪದ್ಧತಿಯನ್ನು ತೊಡೆದು ಹಾಕುವುದಕ್ಕೆ ಸಂಬಂಧಿಸಿದಂತೆ ಅವಶ್ಯಕವಾದಾಗಲೆಲ್ಲಾ ಆದರೆ, ಕೊನೆಪಕ್ಷ ಆರು ತಿಂಗಳಿಗೊಮ್ಮೆಯಾದರೂ ಸಭೆ ಸೇರಬೇಕು.

3) ಸಮಿತಿಯು ಈ ಮುಂದಿನವುಗಳನ್ನು ಪುನರವಲೋಕಿಸತಕ್ಕದ್ದು:

(ಎ) ಕ್ರಿಯಾ ಯೋಜನೆಯ ಅನುಷ್ಠಾನದಲ್ಲಿ ಸಾಧಿಸಲಾದ ಪ್ರಗತಿ, ಮತ್ತು ಅಪಾಯಕಾರಿ ಹಾಗೂ ಅಪಾಯಕಾರಿಯಲ್ಲದ ಉದ್ಯೋಗಗಳು: ಕೈಗಾರಿಕೆಗಳು: ಪ್ರಕ್ರಿಯೆಗಳಲ್ಲಿ ಬಾಲ ಕಾರ್ಮಿಕ ಪದ್ಧತಿ ರದ್ದುಗೊಳಿಸುವುದಕ್ಕೆ ಸಂಬಂಧಪಟ್ಟಂತೆ. ಕ್ರಿಯಾ ಯೋಜನೆಯ ಪರಿಣಾಮಕ್ಕಾಗಿ ಅನುಷ್ಠಾನಕ್ಕಾಗಿ ಕ್ರಮಗಳನ್ನು ಸೂಚಿಸುವುದು.

(ಬಿ) ರಾಷ್ಟ್ರೀಯ ಬಾಲ ಕಾರ್ಮಿಕ ಯೋಜನೆ ಮತ್ತು ಮೇಲ್ವಿಚಾರಣೆಯ ಅನುಷ್ಠಾನದಲ್ಲಿ ಮಾಡಲಾದ ಪ್ರಗತಿ

(ಸಿ) ಕಾಲಕಾಲಕ್ಕೆ ಸರ್ವೋಚ್ಚ ನ್ಯಾಯಾಲಯವು ನೀಡಿದ ನಿರ್ದೇಶನಗಳ ಅನುಷ್ಠಾನ

(ಡಿ) ರಾಜ್ಯ ಮಟ್ಟದ ಸಮನ್ವಯ ಸಮಿತಿ ನಡೆವಳಿಗಳು

4) ಈ ಆದೇಶವು, ಸರ್ಕಾರಿ ಆದೇಶ ಸಂ. ಎಲ್‌ಡಿ 63 ಎಲ್‌ಬಿಡಬ್ಲ್ಯೂ 99 ದಿನಾಂಕ: 01-05-099ನ್ನು ರದ್ದುಗೊಳಿಸುತ್ತದೆ.

5) ಈ ಆದೇಶವು ಕೂಡಲೇ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

-------

ಸಹಿ

(ಎ. ಮುನಿಯಪ್ಪ)

ಸರ್ಕಾರದ ಜಂಟಿ ಕಾರ್ಯದರ್ಶಿ

ಕಾರ್ಮಿಕ ಇಲಾಖೆ.

678.9.

**ಅನುಬಂಧ - ಎ2**

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನೆಗಾಗಿ ಕ್ರಿಯಾ ಯೋಜನೆ ಕರ್ನಾಟಕ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಸಮನ್ವಯ ಸಮಿತಿಯ ರಚನೆ.

**ಪೀಠಿಕೆ:**

ಭಾರತದ ಸಂವಿಧಾನವು, 'ರಾಜ್ಯ ನೀತಿ ನಿರ್ದೇಶಕ ತತ್ವಗಳು' ಮತ್ತು 'ಮೂಲಭೂತ ಹಕ್ಕುಗಳು' ಇವೆರಡರಲ್ಲಿಯೂ ಈ ಮುಂದಿನಂತೆ ಹೇಳಿದೆ: "ರಾಜ್ಯವು, ಕೆಲಸಗಾರರು, ಪುರುಷರು ಮತ್ತು ಮಹಿಳೆಯರು ಆರೋಗ್ಯ ಮತ್ತು ಸಾಮರ್ಥ್ಯ ಪಡೆಯುವುದಕ್ಕೆ ಹಾಗೂ ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ದುರುಪಯೋಗಪಡಿಸಿ ಕೊಳ್ಳದಿರುವಂತೆ, ಮತ್ತು ನಾಗರಿಕರನ್ನು ಆರ್ಥಿಕ ಅಗತ್ಯತೆಯಿಂದಾಗಿ ಅವರ ವಯಸ್ಸು ಮತ್ತು ಸಾಮರ್ಥ್ಯಕ್ಕೆ ಸೂಕ್ತವಲ್ಲದಂಥ ವೃತ್ತಿಗಳನ್ನು ಕೈಗೊಳ್ಳುವಂತೆ ಒತ್ತಾಯಿಸದಂತೆ ಮತ್ತು ನಿರ್ದಿಷ್ಟವಾಗಿ ಮಕ್ಕಳಿಗೆ, ಆರೋಗ್ಯಕರ ರೀತಿಯಲ್ಲಿ, ಮತ್ತು ಮುಕ್ತ ಹಾಗೂ ಘನತೆಯ ಪರಿಸರದಲ್ಲಿ ವಿಕಸನಗೊಳ್ಳುವಂತೆ ಅವಕಾಶಗಳನ್ನು ಮತ್ತು ಸೌಲಭ್ಯಗಳನ್ನು ಕಲ್ಪಿಸುವಂತೆ ತನ್ನ ನೀತಿಯನ್ನು ನಿರ್ದೇಶಿಸತಕ್ಕದ್ದು. " ಬಾಲಕರು ಮತ್ತು ಯುವಕರನ್ನು "ಶೋಷಣೆಯಿಂದ" ಸಂರಕ್ಷಿಸುವುದು ಮತ್ತು ಹದಿನಾಲ್ಕು ವರ್ಷಗಳಿಗಿಂತ ಕಡಿಮೆ ವಯಸ್ಸಿನ ಯಾವುದೇ ಮಗುವು ಯಾವುದೇ ಇತರ ಅಪಾಯಕಾರಿ ಉದ್ಯೋಗದಲ್ಲಿ ಕೆಲಸ ಮಾಡತಕ್ಕದ್ದಲ್ಲ.

2. ಭಾರತ ಸರ್ಕಾರವು ಮಕ್ಕಳ ಹಕ್ಕಗಳನ್ನು ಕುರಿತ ಒಡಂಬಡಿಕೆಯನ್ನು ಸಹ ಒಪ್ಪಿ ಕೊಂಡಿದೆ. ಆ ಒಡಂಬಡಿಕೆಯು, ಮಕ್ಕಳ ಹಕ್ಕಿಗೆ ವಿಶೇಷ ರಕ್ಷಣ ಅಗತ್ಯವೆಂಬುದನ್ನು ಸ್ಥಿರೀಕರಿಸುತ್ತದೆ. ಮತ್ತು ಅದರ ಗುರಿಯು ಅಂಥ ಸಂರಕ್ಷಣೆಯನ್ನು ಒದಗಿಸುವುದು ಮಾತ್ರವಲ್ಲದೆ. ಇದೇ [illegible]ದ್ಯಂತ ಮಕ್ಕಳ ಪರಿಸ್ಥಿಯಲ್ಲಿ ನಿರಂತರ ಸುಧಾರಣೆ ಹಾಗೂ ಶಾಂತಿ ಮತ್ತು ಸುರಕ್ಷೆಯ ಪರಿಸರದಲ್ಲಿ ಅವರ [illegible] ಮತ್ತು ಶಿಕ್ಷಣ ಕ್ರಮದಲ್ಲಿ ಸುಧಾರಣೆ ಸುನಿಶ್ಚಿತಗೊಳಿಸುವುದಾಗಿದೆ.

3. ಹಲವಾರು ಶಾಸನಗಳನ್ನು ಅಧಿನಿಯಮಿತಗೊಳಿಸಲಾಗಿದೆ ಮತ್ತು ಭಾರತ ಸರ್ಕಾರ, ಕರ್ನಾಟಕ ಸರ್ಕಾರ ಮತ್ತು ನ್ಯಾಯಾಲಯಗಳು ಆನೇಕ ಸೂಚನೆಗಳನ್ನು ನೀಡಿವೆ. ಹಾಗೂ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ದುಡಿಯುವ ಮಕ್ಕಳ ಬಗೆಗೆ ಕಾಳಜಿಯನ್ನು ತೋರಿಸುತ್ತದೆ. ಆದರೆ, ಇಂಥ ಕಾನೂನುಗಳನ್ನು ಅನುಷ್ಠಾನಗೊಳಿಸಲು ಯಾವುದೇ ನಿರ್ದಿಷ್ಟ ಕಾರ್ಯಕ್ರಮ ಅಥವಾ ಕ್ರಿಯಾಯೋಜನೆ ಇಲ್ಲ.

4. ಬಾಲ ಕಾರ್ಮಿಕ ಸಮಸ್ಯೆಯು ನಿರ್ದಿಷ್ಟವಾಗಿ ಯಾವುದೇ ಕೈಗಾರಿಕೆ ಅಥವಾ ವೃತ್ತಿಗೆ ಸೀಮಿತವಾಗದಿರುವುದರಿಂದ, ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನೆಗೆ ರಾಜ್ಯ ಸರ್ಕಾರದಿಂದ ವ್ಯಾಪಕವಾದ ಪ್ರಯತ್ನಗಳನ್ನು ಕೈಗೊಳ್ಳಬೇಕಿದೆ. ಅಲ್ಲದೆ. ಕಾರ್ಮಿಕ ಇಲಾಖೆಯೊಂದೇ ಈ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಸಾಧ್ಯವಿಲ್ಲ. ಆದ್ದರಿಂದ, ಕರ್ನಾಟಕ ರಾಜ್ಯದಲ್ಲಿ ಬಾಲ ಕಾರ್ಮಿಕ ಪದ್ಧತಿ ಕೆಡುಕುಗಳ ನಿರ್ಮೂಲನೆಗಾಗಿ ಒಂದು ಸಮಗ್ರ ಕ್ರಿಯಾ ಯೋಜನೆಯು ಅಗತ್ಯವಿದೆ. ಆದ್ದರಿಂದ, ಇಲಾಖೆಯು, ಬಾಲ ಕಾರ್ಮಿಕ ಸಮಸ್ಯೆಯನ್ನು ನಿಭಾಯಿಸುವುದಕ್ಕಾಗಿ ಹಲವಾರು ಇಲಾಖೆಗಳು, ಜಿಲ್ಲಾಡಳಿತಗಳು, ಪಂಚಾಯತ್ ರಾಜ್ ಸಂಸ್ಥೆಗಳು - ನಗರ ಪಾಲಿಕೆಗಳು, ಸ್ವಯಂ ಸೇವಾ ಸಂಸ್ಥೆಗಳು, ಮಹಿಳಾ ಸಂಘಟನೆಗಳು, ಯುವಜನ ಸಂಘಗಳು ಹಾಗೂ ಕಾರ್ಮಿಕ ಸಂಘಗಳ ಮೊದಲಾದವುಗಳ ಪಾಲ್ಗೊಳ್ಳುವಿಕೆಯೊಂದಿಗೆ ಸಮಗ್ರ ಅಭಿಗಮನ ಕ್ರಿಯಾಯೋಜನೆಯನ್ನು ಸಿದ್ಧಪಡಿಸಿದೆ.

5. ರಾಜ್ಯವು "ಬಾಲಕಾರ್ಮಿಕ ಮುಕ್ತರಾಜ್ಯ" ವಾಗಿ ಹೊರ ಹೊಮ್ಮುವಂತೆ ನೋಡಿಕೊಳ್ಳುವುದು ಕ್ರಿಯಾಯೋಜನೆಯ ಮಹತ್ವಾಕಾಂಕ್ಷೆಯಾಗಿದೆ ಮತ್ತು "ಹದಿನಾಲ್ಕು ವರ್ಷಗಳಿಗಿಂತ ಕಡಿಮೆ ವಯಸ್ಸಿನ

ಯಾವುದೇ ಮಗುವು ಮಜೂರಿ ಅಥವಾ ಜೀವನೋಪಾಯಕ್ಕಾಗಿ ದುಡಿಮೆಯಲ್ಲಿ ತೊಡಗದಂತೆ" ನೋಡಿಕೊಳ್ಳುವುದು ಅದರ ಧ್ಯೇಯವಾಗಿದೆ. ಕ್ರಿಯಾ ಯೋಜನೆಯು, ಗೊತ್ತುಪಡಿಸಲಾದ ಗುರಿಗಳನ್ನು ಸಾಧಿಸುವುದಕ್ಕಾಗಿ ಆರು ವರ್ಷಗಳ ಕಾಲಬದ್ಧ ಯೋಜನೆಯನ್ನು ರೂಪಿಸಿದೆ.

6. ಕ್ರಿಯಾ ಯೋಜನೆಯ ಪರಿಣಾಮಕಾರಿ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಒಂದು ರಾಜ್ಯಮಟ್ಟದ ಸಮನ್ವಯ ಸಮಿತಿರಚಿಸಲು ಉದ್ದೇಶಿಸಲಾಗಿದೆ. ಆದ್ದರಿಂದ ಅದಕ್ಕೆ ಸಂಬಂಧಪಟ್ಟಂತೆ ಈ ಮುಂದೆ ಹೇಳಿರುವ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಎಲ್‌ಡಿ 54 ಸಿಎಲ್‌ಸಿ 2000(III)**

**ಬೆಂಗಳೂರು, ದಿನಾಂಕ 29-05-2001**

1. ಪೀಠಿಕಾ ಭಾಗದಲ್ಲಿ ಹೇಳಿರುವ ಕಾರಣಗಳಿಗಾಗಿ, ಸರ್ಕಾರವು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಒಂದು ರಾಜ್ಯಮಟ್ಟದ ಸಮನ್ವಯ ಸಮಿತಿ ರಚಿಸಲು ಉದ್ದೇಶಿಸಿದ್ದು ಅದು ಈ ಮುಂದಿನಂತಿದೆ

| | | |
|---|---|---|
| 1. | ಕರ್ನಾಟಕ ಸರ್ಕಾರದ ಅಪರಕಾರ್ಯದರ್ಶಿ | ಅಧ್ಯಕ್ಷರು |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿ ಕಾರ್ಮಿಕ ಇಲಾಖೆ. | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿ ಹಣಕಾಸು ಇಲಾಖೆ. | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ ಶಿಕ್ಷಣ ಇಲಾಖೆ. | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿ ಗ್ರಾ.ಅ. ಮತ್ತು ಪಂ. ರಾಜ್ ಇಲಾಖೆ | ಸದಸ್ಯರು |
| 6. | ಸರ್ಕಾರದ ಪ್ರಧಾನ ಕಾರ್ಯದರ್ಶಿ ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 7. | ಸರ್ಕಾರದ ಪ್ರಧಾನ ಕಾರ್ಯದರ್ಶಿ ಕಂದಾಯ ಇಲಾಖೆ | ಸದಸ್ಯರು |
| 8. | ಸರ್ಕಾರದ ಕಾರ್ಯದರ್ಶಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 9. | ಸರ್ಕಾರದ ಕಾರ್ಯದರ್ಶಿ ಕಾನೂನು ಇಲಾಖೆ | ಸದಸ್ಯರು |
| 10. | ನಿರ್ದೇಶಕರು, ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 11. | ಕಾರ್ಖಾನೆಗಳು ಮತ್ತು ಬಾಯ್ಲರುಗಳ ಮುಖ್ಯ ಪರಿವೀಕ್ಷಕರು | ಸದಸ್ಯರು |
| 12. | ಕಾರ್ಮಿಕ ಆಯುಕ್ತರು | ಸದಸ್ಯ - ಕಾರ್ಯದರ್ಶಿ. |

2. ರಾಜ್ಯ ಮಟ್ಟದ ಸಮನ್ವಯ ಸಮಿತಿಯು ಅಗತ್ಯತೆ ಅನುಸಾರವಾಗಿ, ಆದರೆ ಕನಿಷ್ಠ ಮೂರು ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು.

3. ರಾಜ್ಯಮಟ್ಟದ ಸಮನ್ವಯ ಸಮಿತಿಯ ಕಾರ್ಯಗಳು ಈ ಮುಂದಿನಂತಿವೆ:

(1) ಕ್ರಿಯಾ ಯೋಜನೆಯ ಅನುಷ್ಠಾನ ಕಾರ್ಯವನ್ನು ಪರಿಶೀಲಿಸುವುದು.

(2) ಕ್ರಿಯಾ ಯೋಜನೆಗಳಿಗೆ ಸಕಾಲದಲ್ಲಿ ನಿಧಿ ಬಿಡುಗಡೆಯಾಗುವಂತೆ ನೋಡಿಕೊಳ್ಳುವುದು.

(3) ಸರ್ವೋಚ್ಛ ನ್ಯಾಯಾಲಯದ ನಿರ್ದೇಶನಗಳ ಅನುಷ್ಠಾನದ ಮೇಲ್ವಿಚಾರಣೆ ಮತ್ತು ಪರಿಶೀಲನೆ ಮಾಡುವುದು.

(4) ಸರ್ಕಾರದ ವಿವಿಧ ಇಲಾಖೆಗಳ ಸಹಕಾರ ಪಡೆಯುವುದು.

(5) ಭಾರತ ಸರ್ಕಾರದ ರಾಷ್ಟ್ರೀಯ ಬಾಲ ಕಾರ್ಮಿಕ ಪದ್ಧತಿ ಯೋಜನೆಯ ಪ್ರಗತಿ ಪರಿಶೀಲನೆ ಮತ್ತು ಮೇಲ್ವಿಚಾರಣೆ ಮಾಡುವುದು.

(6) ಕ್ರಿಯಾ ಯೋಜನೆ ಅನುಷ್ಠಾನ ವಿಚಾರದಲ್ಲಿ ಜಿಲ್ಲಾ ಸಮಿತಿಗಳು ಮಾಡಿರುವ ಪ್ರಗತಿಯನ್ನು ಪರಿಶೀಲಿಸುವುದು.

(7) ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನೆ ಮಾಡುವುದಕ್ಕಾಗಿ ಸಾಕಷ್ಟು ಪ್ರಚಾರ ಮಾಡುವಂತೆ ನೋಡಿಕೊಳ್ಳುವುದು.

(8) ಇಡೀ ರಾಜ್ಯಾದ್ಯಂತ ಬಾಲ ಕಾರ್ಮಿಕ ಪದ್ಧತಿ ಕುರಿತು ಮಾಹಿತಿ ಸೃಜಿಸುವಂತೆ ಮಾಡುವುದು.

(9) ರಾಜ್ಯಮಟ್ಟದಲ್ಲಿ ಕೆಲಸ ಮಾಡುವ ವಿವಿಧ ಕಾರ್ಯ ನಿರ್ವಹಣಾಧಿಕಾರಿಗಳಿಗೆ ಸೂಕ್ತ ತರಬೇತಿ ನೀಡುವಂತೆ ನೋಡಿಕೊಳ್ಳುವುದು.

4. ರಾಜ್ಯಮಟ್ಟದ ಸಮಿತಿಯು, ಸರ್ಕಾರದ ಅನುದಾನಗಳ ಜೊತೆಗೆ, ಸಾರ್ವಜನಿಕರು ಮತ್ತು ಕಂಪನಿಗಳು, ನಿಗಮಗಳು, ಸಂಸ್ಥೆಗಳು ಮೊದಲಾದವುಗಳಿಂದ ದೇಣಿಗೆಗಳು, ವಂತಿಗೆಗಳು, ವಿದ್ಯಾರ್ಥಿವೇತನಗಳು, ಸಹಾಯ ಅಥವಾ ಇತರ ನೆರವನ್ನು ಸರ್ಕಾರವು ಕಾಲಕಾಲಕ್ಕೆ ಈ ಸಂಬಂಧದಲ್ಲಿ ವಿಧಿಸಬಹುದಾದಂಥ ನಿರ್ಬಂಧಗಳಿಗೆ ಒಳಪಟ್ಟು ಪಡೆಯುವ ಅಧಿಕಾರ ಹೊಂದಿದೆ.

5. ಜಿಲ್ಲಾ ಬಾಲ ಕಾರ್ಮಿಕ ಸಂಸ್ಥೆಗಳ ಮೂಲಕ ರಾಷ್ಟ್ರೀಯ ಬಾಲ ಕಾರ್ಮಿಕ ಪದ್ಧತಿ ಯೋಜನೆ (ಎನ್‌ಸಿಎಲ್‌ಪಿ)ಯ ಅನುಷ್ಠಾನದ ಪ್ರಗತಿಯ ಪರಿಶೀಲನೆ ಮಾಡುವುದಕ್ಕಾಗಿ ಸರ್ಕಾರಿ ಆದೇಶ ಸಂಖ್ಯೆ ಎಲ್‌ಡಿ 58 ಎಲ್‌ಬಿಡಬ್ಲ್ಯೂ 96 ದಿನಾಂಕ 9-12-96 ಮತ್ತು 17-12-97ರ ಮೇರೆಗೆ ರಚಿಸಲಾದಂಥ ರಾಜ್ಯಮಟ್ಟದ ಸಮನ್ವಯ ಸಮಿತಿಯನ್ನು ಈ ಮೂಲಕ ರದ್ದುಪಡಿಸಲಾಗಿದೆ.

6. ಈ ಆದೇಶವು ಈ ಕೂಡಲೇ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಸಹಿ
**(ಎ. ಮುನಿಯಲ್ಲಪ್ಪ)**
ಸರ್ಕಾರದ ಸಹ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

ಅನುಬಂಧ - ಎ 3

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಬಾಲ ಕಾರ್ಮಿಕ ಪದ್ಧತಿಯ ನಿರ್ಮೂಲನೆಗಾಗಿ ಕ್ರಿಯಾ ಯೋಜನೆ - ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಸಲಹಾ ಸಮಿತಿಯ ರಚನೆ

**ಪೀಠಿಕೆ:**

ಭಾರತ ಸಂವಿಧಾನವು ''ರಾಜ್ಯ ನೀತಿ ನಿರ್ದೇಶಕ ತತ್ವಗಳು' ಮತ್ತು 'ಮೂಲಭೂತ ಹಕ್ಕುಗಳು' ಇವೆರಡರಲ್ಲಿಯೂ ಈ ಮುಂದಿನಂತೆ ಹೇಳಿದೆ: "ರಾಜ್ಯವು ಕೆಲಸಗಾರರು, ಪುರುಷರು, ಮತ್ತು ಮಹಿಳೆಯರು ಆರೋಗ್ಯ ಮತ್ತು ಸಾಮರ್ಥ್ಯ ಪಡೆಯುವುದಕ್ಕೆ ಮತ್ತು ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ದುರುಪಯೋಗ ಪಡಿಸಿಕೊಳ್ಳದಿರುವಂತೆ, ಮತ್ತು ನಾಗರಿಕರನ್ನು ಆರ್ಥಿಕ ಅಗತ್ಯತೆಯಿಂದಾಗಿ ಇವರ ವಯಸ್ಸು ಮತ್ತು ಸಾಮರ್ಥ್ಯಕ್ಕೆ ಸೂಕ್ತವಲ್ಲದಂಥ ವೃತ್ತಿಗಳನ್ನು ಕೈಗೊಳ್ಳುವಂತೆ ಒತ್ತಾಯಿಸದಂತೆ, ಮತ್ತು ನಿರ್ದಿಷ್ಟವಾಗಿ ಮಕ್ಕಳಿಗೆ. ಆರೋಗ್ಯಕರ ರೀತಿಯಲ್ಲಿ ಮತ್ತು ಮುಕ್ತ ಹಾಗೂ ಘನತೆಯ ಪರಿಸರದಲ್ಲಿ ವಿಕಸಗೊಳ್ಳುವಂತೆ ಅವಕಾಶಗಳನ್ನು ಮತ್ತು ಸೌಲಭ್ಯಗಳನ್ನು ಕಲ್ಪಿಸುವಂತೆ ತನ್ನ ನೀತಿಯನ್ನು ನಿರ್ದೇಶಿಸತಕ್ಕದ್ದು." ಬಾಲಕರು ಮತ್ತು ಯುವಕರನ್ನು 'ಶೋಷಣೆಯಿಂದ ' ಸಂರಕ್ಷಿಸತಕ್ಕದ್ದು ಮತ್ತು ಹದಿನಾಲ್ಕು ವರ್ಗಗಳಿಗಿಂತ ಕಡಿಮೆ ವಯಸ್ಸಿನ ಯಾವುದೇ ಮಗುವು ಯಾವುದೇ ಇತರ ಅಪಾಯಕಾರಿ ಉದ್ಯೋಗದಲ್ಲಿ ಕೆಲಸ ಮಾಡತಕ್ಕದ್ದಲ್ಲ.

2. ಭಾರತ ಸರ್ಕಾರವು ಮಕ್ಕಳ ಹಕ್ಕುಗುಳನ್ನು ಕುರಿತ ಒಡಂಬಡಿಕೆಯನ್ನು ಸಹ ಒಪ್ಪಿಕೊಂಡಿದೆ. ಆ ಒಡಂಬಡಿಕೆಯು ಮಕ್ಕಳ ಹಕ್ಕಿಗೆ ವಿಶೇಷ ರಕ್ಷಣೆ ಅಗತ್ಯವೆಂಬುದನ್ನು ಸ್ವೀಕರಿಸುತ್ತದೆ ಮತ್ತು ಅದರ ಗುರಿಯು ಅಂಥ ಸಂರಕ್ಷಣೆಯನ್ನು ಒದಗಿಸುವುದು ಮಾತ್ರವಲ್ಲದೆ, ಇಡೀ ವಿಶ್ವಾದ್ಯಂತ ಮಕ್ಕಳ ಪರಿಸ್ಥಿತಿಯಲ್ಲಿ ನಿರಂತರ ಸುಧಾರಣೆ ಹಾಗೂ ಶಾಂತಿ ಮತ್ತು ಸುರಕ್ಷೆಯ ಪರಿಸರದಲ್ಲಿ ಮಕ್ಕಳ ಅಭಿವೃದ್ಧಿ ಮತ್ತು ಶಿಕ್ಷಣ ಕ್ರಮದಲ್ಲಿ ಸುಧಾರಣೆ ಸುನಿಶ್ಚಿತಗೊಳಿಸುವುದಾಗಿದೆ.

3. ಹಲವಾರು ಶಾಸನಗಳನ್ನು ಅಧಿನಿಯಮಮಿತಗೊಳಿಸಲಾಗಿದೆ ಮತ್ತು ಭಾರತ ಸರ್ಕಾರ, ಕರ್ನಾಟಕ ಸರ್ಕಾರ ಹಾಗೂ ನ್ಯಾಯಾಲಯಗಳು ಅನೇಕ ಸೂಚನೆಗಳನ್ನು ನೀಡಿವೆ ಮತ್ತು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ದುಡಿಯುವ ಮಕ್ಕಳ ಬಗೆಗೆ ಕಾಳಜಿಯನ್ನು ತೋರಿಸುತ್ತದೆ. ಆದರೆ ಇಂಥ ಕಾನೂನುಗಳನ್ನು ಅನುಷ್ಠಾನಗೊಳಿಸಲು ಯಾವುದೇ ನಿರ್ದಿಷ್ಟ ಕಾರ್ಯಕ್ರಮ ಅಥವಾ ಕ್ರಿಯಾ ಯೋಜನೆ ಎಂಬುದಿಲ್ಲ.

4. ಬಾಲ ಕಾರ್ಮಿಕ ಸಮಸ್ಯೆಯು ನಿರ್ದಿಷ್ಟವಾಗಿ ಯಾವುದೇ ಕೈಗಾರಿಕಾ ಅಥವಾ ವೃತ್ತಿಗೆ ಸೀಮಿತವಾಗದಿರುವುದರಿಂದ ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನೆಗೆ ರಾಜ್ಯ ಸರ್ಕಾರವು ವ್ಯಾಪಕವಾದ ಪ್ರಯತ್ನಗಳನ್ನು ಕೈಗೊಳ್ಳಬೇಕಿದೆ. ಇಲ್ಲದೆ, ಕಾರ್ಮಿಕ ಇಲಾಖೆಯೊಂದೇ ಈ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಸಾಧ್ಯವಿಲ್ಲ, ಆದ್ದರಿಂದ ಕರ್ನಾಟಕ ರಾಜ್ಯದಲ್ಲಿ ಬಾಲ ಕಾರ್ಮಿಕ ಪದ್ಧತಿ ಕೆಡಕುಗಳ ನಿರ್ಮೂಲನೆಗಾಗಿ ಒಂದು ಸಮಗ್ರ ಕ್ರಿಯಾಯೋಜನೆಯ ಅಗತ್ಯವಿದೆ. ಆದ್ದರಿಂದ, ಇಲಾಖೆಯು, ಬಾಲ ಕಾರ್ಮಿಕ ಸಮಸ್ಯೆಯನ್ನು ನಿಭಾಯಿಸುವುದಕ್ಕಾಗಿ ಹಲವಾರು ಇಲಾಖೆಯು, ಬಾಲ ಕಾರ್ಮಿಕ ಸಮಸ್ಯೆಯನ್ನು ನಿಭಾಯಿಸುವುದಕ್ಕಾಗಿ ಹಲವಾರು ಇಲಾಖೆಗಳು, ಜಿಲ್ಲಾಡಳಿತಗಳು, ಪಂಚಾಯತ್‌ರಾಜ್ ಸಂಸ್ಥೆಗಳು, ನಗರ ಪಾಲಿಕೆಗಳು, ಸ್ವಯಂ ಸೇವಾ ಸಂಸ್ಥೆಗಳು, ಮಹಿಳಾ ಸಂಘಟನೆಗಳು, ಯುವಜನ ಸಂಘಗಳು ಹಾಗೂ ಕಾರ್ಮಿಕ ಸಂಘಗಳು ಮೊದಲಾದವುಗಳ ಪಾಲ್ಗೊಳ್ಳುವಿಕೆಯೊಂದಿಗೆ ಸಮಗ್ರ ಅಭಿಗಮನ ಕ್ರಿಯಾಯೋಜನೆಯನ್ನು ಸಿದ್ಧಪಡಿಸಿದೆ.



5. ರಾಜ್ಯವು "ಬಾಲ ಕಾರ್ಮಿಕ ಮುಕ್ತರಾಜ್ಯ" ವಾಗಿ ಹೊರಹೊಮ್ಮುವಂತೆ ನೋಡಿಕೊಳ್ಳುವುದು ಕ್ರಿಯಾ ಯೋಜನೆಯ ಮಹತ್ವಾಕಾಂಕ್ಷೆಯಾಗಿದೆ ಮತ್ತು ಹದಿನಾಲ್ಕು ವರ್ಷಗಳಿಗಿಂತ ಕಡಿನೆ ವಯಸ್ಸಿನ ಯಾವುದೇ ಮಗು " ಮಜೂರಿ ಅಥವಾ ಜೀವನೋಪಾಯಕ್ಕಾಗಿ ದುಡಿಮೆಯಲ್ಲಿ ತೊಡಗದಂತೆ" ನೋಡಿಕೊಳ್ಳುವುದು ಅದರ ಧ್ಯೇಯವಾಗಿದೆ. ಕ್ರಿಯಾ ಯೋಜನೆಯು, ಗೊತ್ತುಪಡಿಸಲಾದ ಗುರಿಗಳನ್ನು ಸಾಧಿಸುವುದಕ್ಕಾಗಿ ಆರು ವರ್ಷಗಳ ಕಾಲಬದ್ಧ ಯೋಜನೆಯನ್ನು ರೂಪಿಸಿದೆ."

6. ಕ್ರಿಯಾ ಯೋಜನೆಯ ಪರಿಣಾಮಕಾರಿ ಅನುಷ್ಠಾನಕ್ಕೆ ಸಂಬಂಧಸಿದಂತೆ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಒಂದು ಜಿಲ್ಲಾ ಮಟ್ಟದ ಸಲಹಾ ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದೆ. ಆದ್ದರಿಂದ ಅದಕ್ಕೆ ಸಂಬಂಧಪಟ್ಟಂತೆ ಈ ಮುಂದೆ ಹೇಳಿರುವ ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

**<u>ಸರ್ಕಾರಿ ಆದೇಶ ಸಂಖ್ಯೆ ಎಲ್‌ಡಿ 54 ಸಿಎಲ್‌ಸಿ 2000(IV)</u>**

**<u>ಬೆಂಗಳೂರು, ದಿನಾಂಕ 29ನೇ ಮೇ 2001</u>**

1. ಮೇಲೆ ಹೇಳಿದ ಸನ್ನಿವೇಶಗಳ ಹಿನ್ನೆಲೆಯಲ್ಲಿ ಸರ್ಕಾರವು ಜಿಲ್ಲಾ ಮಟ್ಟದ ಸಲಹಾ ಸಮಿತಿಯೊಂದನ್ನು ರಚಿಸಲು ಉದ್ದೇಶಿಸಿದ್ದು ಅದು ಈ ಮುಂದಿನಂತಿದೆ.

| | | |
|---|---|---|
| 1. | ಜಿಲ್ಲಾಧಿಕಾರಿ | ಅಧ್ಯಕ್ಷರು |
| 2. | ಜಿಲ್ಲೆಯ ಸಂಬಂಧಪಟ್ಟ ಲೋಕಸಭಾ ಕ್ಷೇತ್ರವನ್ನು ಪ್ರತಿನಿಧಿಸುವಂಥ ಲೋಕಸಭಾ ಸದಸ್ಯರು. | ಸದಸ್ಯರು |
| 3. | ಜಿಲ್ಲೆಯ ರಾಜ್ಯ ಸಭಾ ಸದಸ್ಯರು | ಸದಸ್ಯರು |
| 4. | ಜಿಲ್ಲೆಯ ವಿಧಾನಸಭಾ ಕ್ಷೇತ್ರಗಳನ್ನು ಪ್ರತಿನಿಧಿಸುವಂಥ ಎಲ್ಲಾ ವಿಧಾನಸಭಾ ಸದಸ್ಯರು | ಸದಸ್ಯರು |
| 5. | ಸಂಬಂಧಪಟ್ಟ ಜಿಲ್ಲೆಯ ಎಲ್ಲಾ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 6. | ಜಿಲ್ಲಾ ಪಂಚಾಯಿತಿ ಅಧ್ಯಕ್ಷರು | ಸದಸ್ಯರು |
| 7. | ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ | ಸದಸ್ಯರು |
| 8. | ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ಸದಸ್ಯರು |
| 9. | ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು (ಡಿಡಿಪಿಐ) | ಸದಸ್ಯರು |
| 10. | ಕಾರ್ಖಾನೆಗಳು ಮತ್ತು ಬಾಯ್ಲರುಗಳ ಪರಿವೀಕ್ಷಕರು | ಸದಸ್ಯರು |
| 11. | ಕಾರ್ಮಿಕ ಅಧಿಕಾರಿ | ಸದಸ್ಯರು |
| 12. | ವ್ಯವಸ್ಥಾಪಕರು - ಪ್ರಮುಖ (ಲೀಡ್) ಬ್ಯಾಂಕ್ | ಸದಸ್ಯರು |
| 13. | ಹೆಸರಾಂತ ಸರ್ಕಾರೇತರ ಸಂಘ ಸಂಸ್ಥೆಗಳ ಇಬ್ಬರು ಪ್ರತಿನಿಧಿಗಳು (ಅಧ್ಯಕ್ಷರು ನಾಮನಿರ್ದೇಶಿಸಬೇಕು) | ಸದಸ್ಯರು |

| | | |
|---|---|---|
| 14. | ಕಾರ್ಮಿಕ ಸಂಘದ ಒಬ್ಬ ಪ್ರತಿನಿಧಿ (ಅಧ್ಯಕ್ಷರು ನಾಮ ನಿರ್ದೇಶಿಸಬೇಕು) | ಸದಸ್ಯರು |
| 15. | ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನೆಗಾಗಿ ದುಡುಯುತ್ತಿರುವಂಥ, ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ, ಹಿಂದುಳಿದ ಹಾಗೂ ಮಹಿಳಾ ಪ್ರವರ್ಗಗಳನ್ನು ತಲಾ ಒಬ್ಬರು ಪ್ರತಿ ನಿಧಿಸುವಂಥ ನಾಲ್ಕು ಜನ ಜನಪ್ರಿಯ ಸಮಾಜ ಸೇವಾಕರ್ತರು | ಸದಸ್ಯರು |
| | (ಅಧ್ಯಕ್ಷರು ನಾಮ ನಿರ್ದೇಶಿಸಬೇಕು) | |
| 16. | ಜಿಲ್ಲೆಯ ಕಂದಾಯ ಉಪ-ವಿಭಾಗಗಳ ಉಪ ವಿಭಾಗಾಧಿಕಾರಿಗಳು. | ಸದಸ್ಯರು |
| 17. | ಜಿಲ್ಲಾ ಆರೋಗ್ಯಾಧಿಕಾರಿ | ಸದಸ್ಯರು |
| 18. | ಕಾರ್ಯ ನಿರ್ವಾಹಕ ಇಂಜನಿಯರ್ ಲೋಕೋಪಯೋಗಿ ಇಲಾಖೆ. | ಸದಸ್ಯರು |
| 19. | ಜಿಲ್ಲಾ ಸಾರ್ವಜನಿಕ ವಾರ್ತಾಧಿಕಾರಿ | ಸದಸ್ಯರು |
| 20. | ಸಹಾಯಕ: ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 21. | ಸಂಬಂಧಪಟ್ಟ ವಿಶ್ವವಿದ್ಯಾಲಯ ಸಮಾಜ ಕಲ್ಯಾಣ ವಿಭಾಗದ ಮುಖ್ಯಸ್ಥರು | ಸದಸ್ಯರು |
| 22. | ಪೋಲೀಸ್ ಸೂಪರಿಂಟೆಂಡಂಟ್: ಸಿಪಿಯ ಪ್ರತಿನಿಧಿ | ಸದಸ್ಯರು |
| 23. | ಜಿಲ್ಲಾಧಿಕಾರಿಯವರ ಕೇಂದ್ರ ಕಾರ್ಯಸ್ಥಾನ ಸಹಾಯಕರು | ಸದಸ್ಯ - ಕಾರ್ಯದರ್ಶಿ |

2. ನಾಮ ನಿರ್ದೇಶನಗೊಂಡ ಸದಸ್ಯರ ಪದಾವಧಿಯು ಅಧ್ಯಕ್ಷರು ಅವರನ್ನು ನಾಮ ನಿರ್ದೇಶನ ಮಾಡುವ ದಿನಾಂಕದಿಂದ 2 ವರ್ಷಗಳಾಗಿರತಕ್ಕದ್ದು.

3. ಸಮಿತಿಯು, ಕ್ರಿಯಾಯೋಜನೆ ಹಾಗೂ ರಾಷ್ಟ್ರೀಯ ಬಾಲ ಕಾರ್ಮಿಕ ಯೋಜನೆಯನ್ನು ಅನುಷ್ಠಾನಕ್ಕೆ ತರುವುದಕ್ಕಾಗಿ ಎಲ್ಲಾ ವಿಷಯಗಳ ಬಗ್ಗೆ ಸಲಹೆ ಮತ್ತು ಮಾರ್ಗದರ್ಶನ ನೀಡುವುದಕ್ಕಾಗಿ ಅಗತ್ಯಕ್ಕನುಸಾರ ಆದರೆ ಕನಿಷ್ಠ ಮೂರು ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು.

4. ಸಮಿತಿಯ ಸರ್ಕಾರೇತರ ಸದಸ್ಯರು, ಸ್ವಯಂ ಸೇವಾಧಾರದ ಮೇಲೆ ಕಾರ್ಯ ನಿರ್ವಹಿಸತಕ್ಕದ್ದು ಮತ್ತು ಅಃ ಯಾವುದೇ ಉಪವೇಶನ ಶುಲ್ಕ ಅಥವಾ ಪ್ರಯಾಣ ಭತ್ಯೆ, ದಿನಭತ್ಯೆನ್ನು ಸಂದಾಯ ಮಾಡತಕ್ಕದ್ದಲ್ಲ.

5. ಈ ಸಲಹಾ ಸಮಿತಿಯು, ಅಧಿಸೂಚನೆ ಸಂಖ್ಯೆ ಎಲ್‌ಡಿ 13 ಎಲ್‌ಬಿಡಬ್ಲ್ಯೂ 97(ಪಿ) ದಿನಾಂಕ 29ನೇ ಸೆಪ್ಟೆಂಬರ್ 1997ರಲ್ಲಿ ಜಿಲ್ಲಾ ಸಲಹಾ ಸಮಿತಿ ಮತ್ತು ಜಿಲ್ಲಾ ಮಟ್ಟದ ರಾಷ್ಟ್ರೀಯ ಬಾಲ ಕಾರ್ಮಿಕ ಸಮಿತಿಗೆ ವಹಿಸಿಕೊಟ್ಟಿರುವಂಥ ಕರ್ತವ್ಯಗಳನ್ನು ಸಹ ನೇರವೇರಿಸತಕ್ಕದ್ದು.

6. ಅಧಿಸೂಚನೆ ಸಂಖ್ಯೆ ಎಲ್‌ಡಿ 13 ಎಲ್‌ಬಿಡಬ್ಲ್ಯೂ 97 (ಐ) ದಿನಾಂಕ 29ನೇ ಸೆಪ್ಟೆಂಬರ್ 1997ರ ಮೂಲಕ ರಚಿಸಲಾಗಿದ್ದ ಸಲಹಾ ಸಮಿತಿ ಮತ್ತು ರಾಷ್ಟ್ರೀಯ ಬಾಲ ಕಾರ್ಮಿಕ ಸಮಿತಿಗಳನ್ನು ರದ್ದುಪಡಿಸಲಾಗಿದೆ. ಆದರೆ ಸದರಿ ಅಧಿಸೂಚನೆಯಲ್ಲಿ ಹೇಳಿರುವ ಇತರ ಷರತ್ತುಗಳು ಜಾರಿಯಲ್ಲಿರುತ್ತವೆ.

ಈ ಆದೇಶವು ಈ ಕೂಡಲೇ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಸಹಿ

(ಎ. ಮುನಿಯಲ್ಲಪ್ಪ)

ಸರ್ಕಾರದ ಸಹ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

ಅನುಬಂಧ - ಎ4

<u>ಕರ್ನಾಟಕ ಸರ್ಕಾರದ ನಡವಳಿಗಳು</u>

ವಿಷಯ: ಬಾಲ ಕಾರ್ಮಿಕ ಪದ್ಧತಿಯ ನಿರ್ಮೂಲನೆಗಾಗಿ ಕ್ರಿಯಾ ಯೋಜನೆ - ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಕಾರ್ಯಕಾರಿ ಸಮಿತಿಯ ರಚನೆ.

* * *

<u>ಪೀಠಿಕೆ:</u>

ಭಾರತ ಸಂವಿಧಾನವು 'ರಾಜ್ಯ ನೀತಿ ನಿರ್ದೇಶಕ ತತ್ವಗಳು ಮತ್ತು ಮೂಲಭೂತ ಹಕ್ಕಗಳು' ಇವರೆಡರಲ್ಲಿಯೂ ಈ ಮುಂದಿನಂತೆ ಹೇಳಿದೆ: "ರಾಜ್ಯವು ಕೆಲಸಗಾರರು, ಪುರುಷರು ಮತ್ತು ಮಹಿಳೆಯರು, ಆರೋಗ್ಯ ಮತ್ತು ಸಾಮರ್ಥ್ಯ ಪಡೆಯುವುದಕ್ಕೆ ಮತ್ತು ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ದುರುಪಯೋಗಪಡಿಸಿಕೊಳ್ಳದಿರುವಂತೆ, ಮತ್ತು ನಾಗರಿಕರನ್ನು ಆರ್ಥಿಕ ಅಗತ್ಯತೆಯಿಂದಾಗಿ ಅವರ ವಯಸ್ಸು ಮತ್ತು ಸಾಮರ್ಥ್ಯಕ್ಕೆ ಸೂಕ್ತವಲ್ಲದಂಥ ವೃತ್ತಿಗಳನ್ನು ಕೈಗೊಳ್ಳುವಂತೆ ಒತ್ತಾಯ ಪಡಿಸದಂಥ ಮತ್ತು ನಿರ್ದಿಷ್ಟವಾಗಿ ಮಕ್ಕಳಿಗೆ ಆರೋಗ್ಯಕರ ರೀತಿಯಲ್ಲಿ ಮತ್ತು ಮುಕ್ತ ಹಾಗೂ ಘನತೆಯ ಪರಿಸರದಲ್ಲಿ ವಿಕಸಗೊಳ್ಳುವಂತೆ ಅವಕಾಶಗಳನ್ನು ಮತ್ತು ಸೌಲಭ್ಯಗಳನ್ನು ಕಲ್ಪಿಸುವಂತೆ ತನ್ನ ನೀತಿಯನ್ನು ನಿರ್ದೇಶಿಸತಕ್ಕದ್ದು" ಬಾಲಕರು ಮತ್ತು ಯುವಕರನ್ನು ಶೋಷಣೆಯಿಂದ ಸಂರಕ್ಷಿಸತಕ್ಕದ್ದು ಮತ್ತು ಹದಿನಾಲ್ಕು ವರ್ಷಗಳಿಗಿಂತ ಕಡಿಮೆ ವಯಸ್ಸಿನ ಯಾವುದೇ ಮಗುವು ಯಾವುದೇ ಇತರ ಅಪಾಯಕಾರಿ ಉದ್ಯೋಗದಲ್ಲಿ ಕೆಲಸ ಮಾಡತಕ್ಕದ್ದಲ್ಲ.

2) ಭಾರತ ಸರ್ಕಾರವು ಮಕ್ಕಳ ಹಕ್ಕುಗಳನ್ನು ಕುರಿತ ಒಡಂಬಡಿಕೆಯನ್ನು ಸಹ ಒಪ್ಪಿಕೊಂಡಿದೆ. ಆ ಒಡಂಬಡಿಕೆಯು ಮಕ್ಕಳ ಹಕ್ಕಿಗೆ ವಿಶೇಷ ರಕ್ಷಣೆ ಅಗತ್ಯವೆಂಬುದನ್ನು ಸ್ಥಿರೀಕರಿಸುತ್ತದೆ ಮತ್ತು ಅದರ ಗುರಿಯು ಅಂಥ ಸುರಕ್ಷಣೆಯನ್ನು ಒದಗಿಸುವುದು ಮಾತ್ರವಲ್ಲದೆ, ಮಕ್ಕಳ ಪರಿಸ್ಥಿತಿಯಲ್ಲಿ ನಿರಂತರ ಸುಧಾರಣೆ ಹಾಗೂ ಶಾಂತಿ ಮತ್ತು ಸುರಕ್ಷೆಯ ಪರಿಸರದಲ್ಲಿ ಮಕ್ಕಳ ಅಭಿವೃದ್ಧಿ ಮತ್ತು ಶಿಕ್ಷಣ ಕ್ರಮದಲ್ಲಿ ಸುಧಾರಣೆಯನ್ನು ಇಡೀ ವಿಶ್ವದ್ಯಂತ ಸುನಿಶ್ಚಿತಗೊಳಿಸುವುದಾಗಿದೆ.

3) ಹಲವಾರು ಶಾಸನಗಳನ್ನು ಅಧಿನಿಯಮಿತಗೊಳಿಸಲಾಗಿದೆ ಮತ್ತು ಭಾರತ ಸರ್ಕಾರ, ಕರ್ನಾಟಕ ಸರ್ಕಾರ ಹಾಗೂ ನ್ಯಾಯಾಲಯಗಳು ಆನೇಕ ಸೂಚನೆಗಳನ್ನು ನೀಡಿವೆ ಹಾಗೂ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ದುಡಿಯುವ ಮಕ್ಕಳ ಬಗೆಗೆ ಕಾಳಜಿಯನ್ನು ತೋರಿಸುತ್ತದೆ. ಆದಾಗ್ಯೂ ಇಂಥ ಕಾನೂನುಗಳನ್ನು ಅನುಷ್ಠಾನಗೊಳಿಸಲು ಯಾವುದೇ ನಿರ್ದಿಷ್ಟ ಕಾರ್ಯಕ್ರಮ ಅಥವಾ ಕ್ರಿಯಾ ಯೋಜನೆ ಇಲ್ಲ.

4. ಬಾಲ ಕಾರ್ಮಿಕರ ಸಮಸ್ಯೆಯು, ನಿರ್ದಿಷ್ಟವಾಗಿ ಯಾವುದೇ ಕೈಗಾರಿಕೆ ಅಥವಾ ವೃತ್ತಿಗೆ ಮಾತ್ರ ಸೀಮಿತವಾಗದಿರುವುದರಿಂದ ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನೆಗೆ ರಾಜ್ಯ ಸರ್ಕಾರವು ವ್ಯಾಪಕವಾದ ಪ್ರಯತ್ನಗಳನ್ನು ಕೈಗೊಳ್ಳಬೇಕಿದೆ. ಅಲ್ಲದೆ, ಕಾರ್ಮಿಕ ಇಲಾಖೆಯೊಂದೇ ಈ ಸಮಸ್ಯೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಸಾಧ್ಯವಿಲ್ಲ. ಆದ್ದರಿಂದ ಕರ್ನಾಟಕ ರಾಜ್ಯದಲ್ಲಿ ಬಾಲ ಕಾರ್ಮಿಕ ಪದ್ಧತಿ ಕೆಡಕುಗಳ ನಿರ್ಮೂಲನೆಗಾಗಿ ಒಂದು ಸಮಗ್ರ ಕ್ರಿಯಾ ಯೋಜನೆಯ ಅಗತ್ಯವಿದೆ. ಆದ್ದರಿಂದ ಇಲಾಖೆಯು, ಬಾಲ ಕಾರ್ಮಿಕ ಸಮಸ್ಯೆಯನ್ನು ನಿಭಾಯಿಸುವುದಕ್ಕಾಗಿ ಹಲವಾರು ಇಲಾಖೆಗಳು, ಜಿಲ್ಲಾಳಿತಗಳು, ಪಂಚಾಯತ್ ರಾಜ್ ಸಂಸ್ಥೆಗಳು, ನಗರ ಪಾಲಿಕೆಗಳು, ಸ್ವಯಂ ಸೇವಾ ಸಂಸ್ಥೆಗಳು ಮಹಿಳಾ ಸಂಘಟನೆಗಳು, ಯುವಜನ ಸಂಘಗಳು ಹಾಗೂ ಕಾರ್ಮಿಕ ಸಂಘಗಳು ಮೊದಲಾದವುಗಳ ಪಾಲ್ಗೊಳ್ಳುವಿಕೆಯೊಂದಿಗೆ ಸಮಗ್ರ ಅಭಿಗಮನ ಕ್ರಿಯಾ ಯೋಜನೆಯನ್ನು ಸಿದ್ಧಪಡಿಸಿದೆ.

678.11

5. ರಾಜ್ಯವು "ಬಾಲಕಾರ್ಮಿಕ ಮುಕ್ತ ರಾಜ್ಯ" ವಾಗಿ ಹೊರ ಹೊಮ್ಮುವಂತೆ ನೋಡಿಕೊಳ್ಳುವುದು ಕ್ರಿಯಾಯೋಜನೆಯು ಮಹತ್ವಾತಾಕಂಕ್ಷೆಯಾಗಿದೆ ಮತ್ತು ಹದಿನಾಲ್ಕು ವರ್ಷಗಳಿಗಿಂತ ಕಡಿಮೆವಯಸ್ಸಿನ ಯಾವುದೇ ಮಗು "ಮಜೂರಿಗಳು ಅಥವಾ ಜೀವನೋಪಾಯಕ್ಕಾಗಿ ದುಡಿಮೆಯಲ್ಲಿ ತೊಡಗದಂತೆ " ನೋಡಿಕೊಳ್ಳುವುದು ಅದರ ಧ್ಯೇಯವಾಗಿದೆ. ಕ್ರಿಯಾ ಯೋಜನೆಯು, ಗೊತ್ತುಪಡಿಸಲಾದ ಗುರಿಗಳನ್ನು ಸಾಧಿಸುವುದ್ದಕ್ಕಾಗಿ ಆರು ವರ್ಷಗಳ ಕಾಲಬದ್ಧ ಯೋಜನೆಯನ್ನು ರೂಪಿಸಿದೆ.

6. ಕ್ರಿಯಾ ಯೋಜನೆಯು ಪರಿಣಾಮವಾಗಿ ಅನುಷ್ಠಾನಕ್ಕೆ ಸಂಬಂಧಿಸಿದಂತೆ, ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಒಂದು ಜಿಲ್ಲಾ ಮಟ್ಟದ ಕಾರ್ಯಕಾರಿ ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದೆ. ಆದ್ದರಿಂದ ಅದಕ್ಕೆ ಸಂಬಂಧಪಟ್ಟಂತೆ ಈ ಮುಂದೆ ಹೇಳಿರುವ ಸರ್ಕಾರಿ ಆದೇಶವನ್ನು ಹೊರಡಿಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಎಲ್‌ಡಿ 54 ಸಿಎಲ್‌ಸಿ 2000(ವಿ) ಬೆಂಗಳೂರು, ದಿನಾಂಕ 29-05-2001**

1) ಎಲ್ಲಾ ಜಿಲ್ಲೆಗಳಿಗೆ ಜಿಲ್ಲಾ ಕಾರ್ಯಕಾರಿ ಸಮಿತಿಗಳಿರಬೇಕೆಂದು ಸಹ ಕ್ರಿಯಾಯೋಜನೆಯಲ್ಲಿ ಉದ್ದೇಶಿಸಲಾಗಿದ್ದು, ಅದು ಈ ಮುಂದಿನಂತಿದೆ:

| | |
|---|---|
| 1. ಜಿಲ್ಲಾಧಿಕಾರಿ | ಅಧ್ಯಕ್ಷರು |
| 2. ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್ | ಸದಸ್ಯರು |
| 3. ಉಪ ವಿಭಾಗಾಧಿಕಾರಿ, ಉಪ ವಿಭಾಗ. | ಸದಸ್ಯರು |
| 4. ಜಿಲ್ಲಾ ಆರೋಗ್ಯಾಧಿಕಾರಿ | ಸದಸ್ಯರು |
| 5. ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಸಹಾಯಕ ನಿರ್ದೇಶಕರು | ಸದಸ್ಯರು |
| 6. ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು (ಡಿಡಿಪಿಐ) | ಸದಸ್ಯರು |
| 7. ಕಾರ್ಖಾನೆಗಳ ಪರಿವೀಕ್ಷಕರು | ಸದಸ್ಯರು |
| 8. ಕಾರ್ಮಿಕ ಅಧಿಕಾರಿ | ಸದಸ್ಯರು |
| 9. ಪ್ರಧಾನ ವ್ಯವಸ್ಥಾಪಕರು, ಡಿಐಸಿ | ಸದಸ್ಯರು |
| 10. ಕಾರ್ಯ ನಿರ್ವಾಹಕ ಇಂಜಿನಿಯರ್ ಲೋಕೋಪಯೋಗಿ ಇಲಾಖೆ | ಸದಸ್ಯರು |
| 11. ಜಿಲ್ಲಾ ವಾರ್ತಾ ಮತ್ತು ಪ್ರಚಾರಾಧಿಕಾರಿ | ಸದಸ್ಯರು |
| 12. ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ | ಸದಸ್ಯರು |
| 13. ಪೋಲೀಸ್ ಸೂಪರಿಂಟೆಂಡೆಂಟ್ | ಸದಸ್ಯರು |
| 14. ಅಲ್ಪ ಸಂಖ್ಯಾತರ ಇಲಾಖೆಯ ಪ್ರತಿನಿಧಿಗಳು | ಸದಸ್ಯರು |
| 15. ಹಿಂದುಳಿದ ವರ್ಗಗಳ ಇಲಾಖೆಯ ಪ್ರತಿನಿಧಿಗಳು | ಸದಸ್ಯರು |

| | | |
|---|---|---|
| 16. | ಜಿಲ್ಲಾ ಕೇಂದ್ರ ಕಾರ್ಯಸ್ಥಾನದ ಸಂಬಂಧಪಟ್ಟ ನಗರ, ಸ್ಥಳೀಯ ಸಂಸ್ಥೆಯ ಆಯುಕ್ತರು: ಮುಖ್ಯ ಅಧಿಕಾರಿ. | ಸದಸ್ಯರು |
| 17. | ಯೋಜನಾ ನಿರ್ದೇಶಕರು | ಸದಸ್ಯ ಕಾರ್ಯದರ್ಶಿ |

2. ನಾಮ ನಿರ್ದೇಶನಗೊಂಡ ಸದಸ್ಯರ ಪದಾವಧಿಯು ಅಧ್ಯಕ್ಷರು ಅವರನ್ನು ನಾಮ ನಿರ್ದೇಶನ ಮಾಡಿದ ದಿನಾಂಕದಿಂದ 2 ವರ್ಷಗಳಾಗಿರತಕ್ಕದ್ದು.

3. ಸಮಿತಿಯ ಸರ್ಕಾರೇತರ ಸದಸ್ಯರು, ಸ್ವಯಂ ಸೇವಾಧಾರದ ಮೇಲೆ ಕಾರ್ಯ ನಿರ್ವಹಿಸತಕ್ಕದ್ದು ಮತ್ತು ಅವರಿಗೆ ಯಾವುದೇ ಉಪವೇಶನ ಶುಲ್ಕ ಅಥವಾ ಪ್ರಯಾಣ ಭತ್ಯೆ, ದಿನಭತ್ಯೆನ್ನು ಸಂದಾಯ ಮಾಡತಕ್ಕದ್ದಲ್ಲ.

4. ಜಿಲ್ಲಾ ಕಾರ್ಯಕಾರಿ ಸಮಿತಿಯ ಅಗತ್ಯಕ್ಕನುಸಾರವಾಗಿ ಆದರೆ ಕನಿಷ್ಠ ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು, ಕಾರ್ಯಕಾರಿ ಸಮಿತಿಯು, ಕ್ರಿಯಾ ಯೋಜನೆಯಲ್ಲಿ ಹೊರಡಿಸಿರುವ ಎಲ್ಲಾ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

5. ಅಧಿಸೂಚನೆ ಸಂಖ್ಯೆ ಎಲ್‌ಡಿ 13 ಎಲ್‌ಬಿಡಬ್ಲ್ಯೂ 97 (ಪಿ) ದಿನಾಂಕ 29ನೇ ಸೆಪ್ಟೆಂಬರ್ 1997ರ ಮೇರೆಗೆ ರಚಿಸಿರುವ ಸಲಹಾ ಸಮಿತಿ ಮತ್ತು ರಾಷ್ಟ್ರೀಯ ಬಾಲಕಾರ್ಮಿಕ ಸಮಿತಿಗಳನ್ನು ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಸಹಿ

(ಎ. ಮುನಿಯಲ್ಲಪ್ಪ)

ಸಹ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

ಅನುಬಂಧ - ಬಿ1

**ಅಪಾಯಕಾರಿ ಕೆಲಸಗಳಿಗೆ ಸಂಬಂಧಿಸಿದ ಸಮೀಕ್ಷಾ ನಮೂನೆ ಬಾಲ ಕಾರ್ಮಿಕರ ಸಮೀಕ್ಷೆ ಮತ್ತು ಗುರುತಿಸುವಿಕೆ**

1) ಸಮೀಕ್ಷೆಯ ದಿನಾಂಕ :

2) ಜಿಲ್ಲೆಯ ಹೆಸರು :

3) ತಾಲ್ಲೂಕಿನ ಹೆಸರು :

ಭಾಗ - ಎ

ಘಟಕ: ಸಂಸ್ಥೆ:

1) ಮಾಲೀಕನ: ನಿಯೋಜಕನ ಹೆಸರು ಮತ್ತು ವಿಳಾಸ

2) ಸಂಸ್ಥೆಯ ಹೆಸರು ಮತ್ತು ವಿಳಾಸ

3) ಚಟುವಟಿಕೆಯ ಸ್ವರೂಪ

4) ಬಾಲ ಕಾರ್ಮಿಕರು (14 ವರ್ಷಗಳಿಗಿಂತ ಕಡಿಮೆ ವಯಸ್ಸಿನ) ನಿಯೋಜಿತರಾಗಿರುವರೇ

ಹೌದು : ಇಲ್ಲ

5) ಹೌದು ಎಂದಾದರೆ, ಈ ಕೆಳಗೆ ಹೇಳಿರುವಂತೆ ಮಾಹಿತಿ ನೀಡಿ:

| ಬಾಲ ಕಾರ್ಮಿಕನ ಹೆಸರು ಮತ್ತು ವಿಳಾಸ | ವಯಸ್ಸು | ಲಿಂಗ | ಶೈಕ್ಷಣಿಕ ಮಟ್ಟ | ಎಂದಿನಿಂದ ಕೆಲಸ ಮಾಡುತ್ತಿದ್ದಾರೆ | ಒಂದು ದಿನದಲ್ಲಿ ಎಷ್ಟು ಘಂಟೆಗಳು ಕೆಲಸ ಮಾಡುವರು | ತಿಂಗಳ ಮಜೂರಿ | ಧರ್ಮ ಮತ್ತು ಜಾತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | | | | | | |
| | | | | | | | |

ಭಾಗ ಬಿ: (ಕೈಗಾರಿಕೆ):ಕಾರ್ಯ ಸಂಸ್ಥೆವಾರು ಸಮೀಕ್ಷೆಯು, ನೈಜ ಚಿತ್ರಣ ನೀಡದಿರಬಹುದಾದ್ದರಿಂದ ಗ್ರಾಮಗಳು: ಕಾಲೋನಿಗಳು: ಕೊಳಚೆ ಪ್ರದೇಶಗಳಿಗೆ ಭೇಟಿ ನೀಡುವ ಮೂಲಕ ಕುಟುಂಬ ಆಧಾರಿತ ಸಮೀಕ್ಷೆ ನಡೆಸಬೇಕು)

1) ಪಾಲಕರ ಹೆಸರು ಮತ್ತು ವಿಳಾಸ :

2) ಧರ್ಮ : ಜಾತಿ :

3) ಕುಟುಂಬದ ವಾರ್ಷಿಕ ವರಮಾನ :

4) ಆ ಕುಟುಂಬದಲ್ಲಿರುವ 14 ವರ್ಷಗಳಿಗಿಂತ ಕಡಿಮೆ ವಯಸ್ಸಿನ ದುಡಿಯುವ ಮಕ್ಕಳ ವಿವರಗಳು :

| ಮಕ್ಕಳ ಹೆಸರು | ವಯಸ್ಸು | ಶಿಕ್ಷಣದ ಮಟ್ಟ | ಮಕ್ಕಳು ಕೆಲಸ ಮಾಡುತ್ತಿರುವ ಸಂಸ್ಥೆ: ನಿಯೋಜಕನ ಹೆಸರು | ಒಂದು ದಿನದಲ್ಲಿ ಕೆಲಸದ ಘಂಟೆಗಳು | ಪ್ರತಿ ವಾರದ ಮಜೂರಿ |
|---|---|---|---|---|---|
| | | | | | |

5) ಕಾರ್ಯ ಚಟುವಟಿಕೆಯ ಸ್ವರೂಪ :

6) ಪಾಲಕರೂ ಸೇರಿದಂತೆ, ಕುಟುಂಬದ ವಯಸ್ಕ ಸದಸ್ಯರ ವಿವರಗಳು :

| ಹೆಸರು | ವಯಸ್ಸು | ಲಿಂಗ | ಶೈಕ್ಷಣಿಕ ಮಟ್ಟ | ವೃತ್ತಿ | ಬಾಲ ಕಾರ್ಮಿಕನೊಂದಿಗಿನ ಸಂಬಂಧ |
|---|---|---|---|---|---|
| | | | | | |

7) ಮಕ್ಕಳನ್ನು ಕೆಲಸಕ್ಕೆ ಕಳಿಸುವುದಕ್ಕೆ ಕಾರಣ:

8) ಮಕ್ಕಳು ಕೆಲಸ ಮಾಡುತ್ತಿರುವುದಕ್ಕೆ ಪ್ರತಿಯಾಗಿ ನೀವು ನಿಯೋಜಕನಿಂದ ಮುಂಗಡ ಹಣ ಅಥವಾ ಸಾಲವನ್ನು ಪಡೆದಿರುವಿರಾ? ಹೌದು: ಇಲ್ಲ
ಹೌದು ಎಂದಾದರೆ

ಎ. ಅಂಥ ಮೊಬಲಗು: ನಗದು ಅಥವಾ ಇನ್ನಿತರ ರೂಪದಲ್ಲಿ

ಬಿ. ಬಡ್ಡಿ ದರ

9) ಸರ್ಕಾರದಿಂದ ಬೇಕಿರುವ ನೆರವು

ನಿಯೋಜಕ ಮಾಲೀಕನ ಸಹಿ

ಪೋಷಕರ: ಸಹಿ ಅಥವಾ ಹೆಬ್ಬೆಟ್ಟಿನ ಗುರುತು

ಸಮೀಕ್ಷೆದಾರನ ಹೆಸರು ಪದನಾಮ ಮತ್ತು ಸಹಿ

**ಟಿಪ್ಪಣಿ:**

1. ಪ್ರತಿಯೊಂದು ಬಾಲ ಕಾರ್ಮಿಕನಿಗೂ ಒಂದು ನಮೂನೆಯನ್ನು ಬಳಸುವುದು.

2. ಕುಟುಂಬ ಸಮೀಕ್ಷೆ ಸಂಬಂಧದಲ್ಲಿ, ಪ್ರತಿಯೊಂದು ಕುಟುಂಬಕ್ಕೆ ಒಂದು ನಮೂನೆಯನ್ನು ಬಳಸುವುದು.

ಅನುಬಂಧ - ಬಿ2

## ಅಪಾಯಕಾರಿಯಲ್ಲದ ಕೆಲಸಗಳಿಗೆ ಸಂಬಂಧಿಸಿದ ಸಮೀಕ್ಷಾ ನಮೂನೆ

## ಬಾಲ ಕಾರ್ಮಿಕ ಸಮೀಕ್ಷೆ ಮತ್ತು ಗುರುತಿಸುವಿಕೆ:

1) ಸಮೀಕ್ಷೆಯ ದಿನಾಂಕ :
2) ಜಿಲ್ಲೆಯ ಹೆಸರು :
3) ತಾಲ್ಲೂಕಿನ ಹೆಸರು :

### ಭಾಗ - ಎ

ಘಟಕ : ಸಂಸ್ಥೆ

1) ಮಾಲೀಕ: ನಿಯೋಜಕನ ಹೆಸರು ಮತ್ತು ವಿಳಾಸ:

2) ಸಂಸ್ಥೆಯ ಹೆಸರು ಮತ್ತು ವಿಳಾಸ:

3) ಕಾರ್ಯಚಟುವಟಿಕೆಯ ಸ್ವರೂಪ:

4) ಬಾಲ ಕಾರ್ಮಿಕರು (14 ವರ್ಷಗಳಿಗಿಂತ ಕಡಿಮೆ ವಯಸ್ಸಿನ)

ನಿಯೋಜಿತರಾಗಿರುವರೇ:

ಹೌದು : ಇಲ್ಲ

5) ಹೌದು ಎಂದಾದರೆ, ಈ ಮುಂದೆ ಹೇಳಿರುವಂತೆ ವಿವರಗಳನ್ನು ನೀಡಿ:

| ಬಾಲ ಕಾರ್ಮಿಕನ ಹೆಸರು ಮತ್ತು ವಿಳಾಸ | ವಯಸ್ಸು | ಲಿಂಗ | ಶೈಕ್ಷಣಿಕ ಮಟ್ಟ | ಎಂದಿನಿಂದ ಕೆಲಸ ಮಾಡುತ್ತಿರುವುದು | ಒಂದು ದಿನದಲ್ಲಿ ಕೆಲಸದ ಘಂಟೆಗಳು | ಮಾಸಿಕ ಮಜೂರಿ | ಧರ್ಮ ಮತ್ತು ಜಾತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | | | | | | | |
| | | | | | | | |

ಭಾಗ ಬಿ: (ಕೈಗಾರಿಕೆ):ಕಾರ್ಯ ಸಂಸ್ಥೆವಾರು ಸಮೀಕ್ಷೆಯು, ನೈಜ ಚಿತ್ರಣ ನೀಡದಿರಬಹುದಾದ್ದರಿಂದ ಗ್ರಾಮಗಳು: ಕಾಲೋನಿಗಳು: ಕೊಳಚಿ ಪ್ರದೇಶಗಳಿಗೆ ಭೇಟಿ ನೀಡುವ ಮೂಲಕ ಕುಟುಂಬ ಆಧಾರಿತ ಸಮೀಕ್ಷೆ ನಡೆಸಬೇಕು)

1. ಪಾಲಕರ ಹೆಸರು ಮತ್ತು ವಿಳಾಸ :
2. ಧರ್ಮ : ಜಾತಿ :
3. ಕುಟುಂಬದ ವಾರ್ಷಿಕ ವರಮಾನ :
4. ಆ ಕುಟುಂಬದಲ್ಲಿರುವ 14 ವರ್ಷಗಳಿಗಿಂತ ಕಡಿಮೆ ವಯಸ್ಸಿಗೆ ದುಡಿಯುವ ಮಕ್ಕಳ ವಿವರಗಳು :

| ಮಕ್ಕಳ ಹೆಸರು | ವಯಸ್ಸು | ಶೈಕ್ಷಣಿಕ ಮಟ್ಟ | ಮಕ್ಕಳು ಕೆಲಸ ಮಾಡುತ್ತಿರುವ ಕಾರ್ಯ ಸಂಸ್ಥೆ: ನಿಯೋಜಕನ ಹೆಸರು | ಒಂದು ದಿನದಲ್ಲಿ ಕೆಲಸದ ಘಂಟೆಗಳು | ವಾರದ ಮಜೂರಿ |
|---|---|---|---|---|---|
| | | | | | |

5. ಕಾರ್ಯ ಚಟುವಟಿಕೆಯ ಸ್ವರೂಪ :

6. ಪಾಲಕರೂ ಸೇರಿದಂತೆ, ಕುಟುಂಬದ ವಯಸ್ಕ ಸದಸ್ಯರ ವಿವರಗಳು :

| ಹೆಸರು | ವಯಸ್ಸು | ಲಿಂಗ | ಶೈಕ್ಷಣಿಕ ಮಟ್ಟ | ವೃತ್ತಿ | ಬಾಲ ಕಾರ್ಮಿಕನೊಂದಿಗಿನ ಸಂಬಂಧ |
|---|---|---|---|---|---|
| | | | | | |

7. ಮಕ್ಕಳನ್ನು ಕೆಲಸಕ್ಕೆ ಕಳಿಸುವುದಕ್ಕೆ ಕಾರಣ:

8. ಮಕ್ಕಳು ಕೆಲಸ ಮಾಡುತ್ತಿರುವುದಕ್ಕೆ ಪ್ರತಿಯಾಗಿ ನೀವು ನಿಯೋಜಕನಿಂದ ಮುಂಗಡ ಹಣ ಅಥವಾ ಸಾಲವನ್ನು ಪಡೆದಿರುವಿರಾ? ಹೌದು: ಇಲ್ಲ

ಹೌದು ಎಂದಾದರೆ,

ಎ) ಅಂಥ ಮೊಬಲಗು: ನಗದು ಅಥವಾ ಇನ್ನಿತರ ರೂಪದಲ್ಲಿ

ಬಿ) ಬಡ್ಡಿ ದರ

9. ಸರ್ಕಾರದಿಂದ ಬೇಕಿರುವ ನೆರವು

ನಿಯೋಜಕ ಮಾಲೀಕನ ಸಹಿ — ಪಾಲಕರ ಸಹಿ ಅಥವಾ ಹೆಬ್ಬೆಟ್ಟಿನ ಗುರುತು — ಸಮೀಕ್ಷೆದಾರನ ಹೆಸರು ಪದನಾಮ ಮತ್ತು ಸಹಿ

**ಟಿಪ್ಪಣಿ:**

1. ಪ್ರತಿಯೊಂದು ಬಾಲ ಕಾರ್ಮಿಕನಿಗೂ ಒಂದು ನಮೂನೆಯನ್ನು ಬಳಸುವುದು.

2. ಕುಟುಂಬದ ಸಮೀಕ್ಷೆ ಸಂಬಂಧದಲ್ಲಿ, ಪ್ರತಿಯೊಂದು ಕುಟುಂಬಕ್ಕೆ ಒಂದು ನಮೂನೆಯನ್ನು ಬಳಸುವುದು.

ಅನುಬಂಧ - ಸಿ1

**ಅಪಾಯಕಾರಿ ವೃತ್ತಿಗಳು: ಪ್ರಕ್ರಿಯೆಗಳಲ್ಲಿ ಗುರುತಿಸಲಾದ ಬಾಲ ಕಾರ್ಮಿಕರ ಪಟ್ಟಿ - ತಾಲ್ಲೂಕುವಾರು ವರದಿ (ತಹಸೀಲ್ದಾರರಿಂದ ಜಿಲ್ಲಾಧಿಕಾರಿಯವರಿಗೆ)**

ತಾಲೂಕು..... ಜಿಲ್ಲೆ.....

| ಕ್ರ. ಸಂ. | ಪಾಲಕರ ವಿಳಾಸ ದೊಂದಿಗೆ ಕಾರ್ಮಿಕನ ಹೆಸರು | ವಯಸ್ಸು | ಲಿಂಗ | ಜಾತಿ | ಶೈಕ್ಷಣಿಕ ಮಟ್ಟ | ಕಾರ್ಯ ಸಂಸ್ಥೆಯ ಹೆಸರು ಮತ್ತು ವಿಳಾಸ | ಕಾರ್ಯ ಚಟುವಟಿಕೆಯ ಸ್ವರೂಪ | ನಿಯೋಜಕನ ಹೆಸರು |
|---|---|---|---|---|---|---|---|---|
| | | | | | | | | |

ಅನುಬಂಧ - ೩2

**ಅಪಾಯಕಾರಿ ವೃತ್ತಿಗಳು: ಪ್ರಕ್ರಿಯೆಗಳಲ್ಲಿ ಗುರುತಿಸಲಾದ ಬಾಲ ಕಾರ್ಮಿಕರ ಪಟ್ಟಿ - ತಾಲ್ಲೂಕುವಾರು ವರದಿ (ತಹಸೀಲ್ದಾರರಿಂದ ಜಿಲ್ಲಾಧಿಕಾರಿಯವರಿಗೆ)**

ತಾಲ್ಲೂಕು..... ಜಿಲ್ಲೆ.....

| ಕ್ರ. ಸಂ. | ಪಾಲಕರ ವಿಳಾಸ ದೊಂದಿಗೆ ಕಾರ್ಮಿಕನ ಹೆಸರು | ವಯಸ್ಸು | ಲಿಂಗ | ಜಾತಿ | ಶೈಕ್ಷಣಿಕ ಮಟ್ಟ | ಕಾರ್ಯ ಸಂಸ್ಥೆಯ ಹೆಸರು ಮತ್ತು ವಿಳಾಸ | ಕಾರ್ಯ ಚಟುವಟಿಕೆಯ ಸ್ವರೂಪ | ನಿಯೋಜಕನ ಹೆಸರು |
| --- | --- | --- | --- | --- | --- | --- | --- | --- |
| | | | | | | | | |

ಅನುಬಂಧ - ಡಿ1

## ಅಪಾಯಕಾರಿಯಲ್ಲದ ವೃತ್ತಿಗಳು: ಪ್ರಕ್ರಿಯೆಗಳಲ್ಲಿ ಗುರುತಿಸಲಾದ ಬಾಲ ಕಾರ್ಮಿಕರ ಸಂಖ್ಯೆ - ಜಿಲ್ಲಾವಾರು ಕ್ರೋಢೀಕೃತ ವರದಿ (ಜಿಲ್ಲಾಧಿಕಾರಿಯಿಂದ ಕಾರ್ಮಿಕ ಆಯುಕ್ತರಿಗೆ)

| ಕ್ರ. ಸಂ. | ಕಾರ್ಯ ಚಟುವಟಿಕೆಯ ಸ್ವರೂಪ | ವಿಳಾಸದೊಂದಿಗೆ ಕಾರ್ಯ ಸಂಸ್ಥೆಯ ಸಂಖ್ಯೆ | ಪಂ.ಜಾ | | ಪಂ.ಪಂ | | ಇತರೆ | | ಒಟ್ಟು |
|---|---|---|---|---|---|---|---|---|---|
| | | | ಪು. | ಮ. | ಪು. | ಮ. | ಪು. | ಮ. | |
| | | | | | | | | | |

ಅನುಬಂಧ - ಡಿ2

ಅಪಾಯಕಾರಿಯಲ್ಲದ ವೃತ್ತಿಗಳು: ಪ್ರಕ್ರಿಯೆಗಳಲ್ಲಿ ಗುರುತಿಸಲಾದಂತಹ ಬಾಲ ಕಾರ್ಮಿಕರ ಸಂಖ್ಯೆ - ಜಿಲ್ಲಾವಾರು ಕ್ರೋಢೀಕೃತ ವರದಿ (ಜಿಲ್ಲಾಧಿಕಾರಿಯಿಂದ ಕಾರ್ಮಿಕ ಆಯುಕ್ತರಿಗೆ)

| ಕ್ರ. ಸಂ. | ಕಾರ್ಯ ಚಟುವಟಿಕೆಯ ಸ್ವರೂಪ | ವಿಳಾಸದೊಂದಿಗೆ ಕಾರ್ಯ ಸಂಸ್ಥೆಯ ಸಂಖ್ಯೆ | ಪಂ.ಜಾ | | ಪಂ.ಪಂ | | ಇತರೆ | | ಒಟ್ಟು |
|---|---|---|---|---|---|---|---|---|---|
| | | | ಪು. | ಮ. | ಪು. | ಮ. | ಪು. | ಮ. | |

ಅನುಬಂಧ -೯

ಕಾರಣ ತೋರಿಸುವ ನೋಟೀಸು (ಅಪಾಯಕಾರಿ ಕಾರ್ಯಸಂಸ್ಥೆಗಳಿಗೆ ಮಾತ್ರ): ಬಾಲ ಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮ, 1986 ಹಾಗೂ ನಿಯಮಗಳ ಮೇರೆಗೆ .

............................ವ್ಯವಹಾರದಲ್ಲಿ ತೊಡಗಿರುವ ನಿಮ್ಮ ಕಾರ್ಯಸಂಸ್ಥೆ ಮೆಸರ್ಸ್................ನ್ನು ....................ದರಂದು ....................ಸಮಯಕ್ಕೆ ಈ ಕೆಳಗೆ ಸಹಿ ಮಾಡಿರುವವರು ಪರಿವೀಕ್ಷಿಸಿದ್ದಾರೆ. ಮತ್ತು ಪರಿವೀಕ್ಷಣೆಯ ಸಮಯದಲ್ಲಿ ನಿಮ್ಮ ಕಾರ್ಯ ಸಂಸ್ಥೆಯಲ್ಲಿ ಕೆಲಸ ಕಾರ್ಯಗಳ ನಿರ್ವಹಣೆಗಾಗಿ ಮಕ್ಕಳನ್ನು ನಿಯೋಜಿಸಿರುವುದನ್ನು ಪತ್ತೆ ಹಚ್ಚಲಾಗಿದೆ ಮತ್ತು ಈ ಕೆಳಕಂಡ ............... (ಸಂಖ್ಯೆ) ಮಕ್ಕಳು ಕಾರ್ಯನಿರತವಾಗಿರುವುದು ಕಂಡುಬಂದಿದೆ.

| ಕ್ರ. ಸಂ. | ಮಕ್ಕಳ ಹೆಸರು | ವಯಸ್ಸು |
|---|---|---|
| 1 | | |
| 2 | | |
| 3 | | |
| 4 | | |
| 5 | | |
| 6 | | |
| 7 | | |

ಹೀಗಾಗಿ, ನೀವು ಬಾಲ ಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮ, 1986ರ ಪ್ರಕರಣ 3ನ್ನು ಉಲ್ಲಂಘಿಸಿದ್ದು, ಅದು ಸದರಿ ಅಧಿನಿಯಮದ ಪ್ರಕರಣ 14ರ ಮೇರೆಗೆ ದಂಡನೀಯವಾಗಿದೆ.

ಆದ್ದರಿಂದ, ಸದರಿ ಉಲ್ಲಂಘನೆಗಾಗಿ ಸಕ್ಷಮ ನ್ಯಾಯಾಲಯದ ಮುಂದೆ ನಿಮ್ಮ ವಿರುದ್ಧ ಏಕೆ ಪ್ರಾಸಿಕ್ಯೂಷನ್ ಹೂಡಬಾರದೆಂಬ ಬಗ್ಗೆ ಈ ದಿನದಿಂದ ಏಳು ದಿನಗಳ ಒಳಗಾಗಿ ಕಾರಣ ತೋರಿಸುವಂತೆ ನಿಮಗೆ ಕಾನೂನು ಬದ್ಧವಾಗಿ ಈ ಮೂಲಕ ನಿರ್ದೇಶಿಸಲಾಗಿದೆ.

ಬಾಲ ಕಾರ್ಮಿಕ ಅಧಿನಿಯಮ 1986 ( ನಿ ಮತ್ತು ನಿ)
17ನೇ ಪ್ರಕರಣದ ಅಡಿ ನೇಮಕಗೊಂಡ
ಪರಿವೀಕ್ಷಣಾಧಿಕಾರಿ

ಇವರಿಗೆ:

ಮೆಸರ್ಸ್ .......................

.......................

**ನೀಡಿಕೆ:**

1. ಶ್ರೀ: ಶ್ರೀಮತಿ ............................
2. ಶ್ರೀ: ಶ್ರೀಮತಿ ............................

ಟಿಪ್ಪಣಿ: ಇದೇ ನಮೂನೆಯನ್ನು ಸೂಕ್ತ ತಿದ್ದುಪಡಿ ಮಾಡುವ ಮೂಲಕ ಅಪಾಯಕಾರಿಯಲ್ಲದ ಕಾರ್ಯಚಟುವಟಿಕೆಗಳಿಗೂ ಕೂಡ ಬಳಸಬಹುದಾಗಿದೆ:

ಅನುಬಂಧ - ಎಫ್

## ಅಧಿಸೂಚನೆ

### ಸಂ. ಎಲ್‌ಡಿ 13 ಎಲ್‌ಬಿಡಬ್ಲ್ಯೂ 97 (ಪಿ), ದಿನಾಂಕ 29ನೇ ಸೆಪ್ಟೆಂಬರ್ 1997

1. **ಪೀಠಿಕೆ:**

ಭಾರತ ಸರ್ವೋಚ್ಚ ನ್ಯಾಯಾಲಯವು, ದಿನಾಂಕ: 10-12-1996ರಂದು ಬಾಲ ಕಾರ್ಮಿಕ ಪದ್ಧತಿ ಕುರಿತಂತೆ ಕೆಲವು ದೃಷ್ಟಿಕೋನವನ್ನೊಳಗೊಂಡ ತೀರ್ಪನ್ನು ನೀಡಿದೆ. ಬಾಲ ಕಾರ್ಮಿಕರ ಪುನರ್ವಸತಿ ಹಾಗೂ ಕಲ್ಯಾಣ ನಿಧಿ ಹೆಸರಿನಡಿ ಜಿಲ್ಲಾ ಮಟ್ಟದಲ್ಲಿ ನಿಧಿಯೊಂದನ್ನು ಸ್ಥಾಪಿಸುವುದು ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳಲ್ಲೊಂದಾಗಿದೆ. ಸದರಿ ತೀರ್ಪಿಗನುಗುಣವಾಗಿ ಬಾಲ ಕಾರ್ಮಿಕರ ಪುನರ್ವಸತಿ ಹಾಗೂ ಕಲ್ಯಾಣ ನಿಧಿಯನ್ನು ಸ್ಥಾಪಿಸುವ ಮೂಲ ಉದ್ದೇಶದೊಂದಿಗೆ ಈ ಯೋಜನೆಯನ್ನು ರೂಪಿಸಲಾಗಿದೆ. ಅಪಾಯಕಾರಿ ಕಸುಬುಗಳಿಂದ ಮಕ್ಕಳನ್ನು ವಿಮುಕ್ತಗೊಳಿಸಬಯಸುವ ಪಾಲಕರಿಗೆ ಕೆಲವು ಪರಿಹಾರಗಳನ್ನು ಒದಗಿಸುವ ನಿಟ್ಟಿನಲ್ಲಿ ಈ ಯೋಜನೆಯನ್ನು ರಚಿಸಲಾಗಿದೆ. ಈ ಯೋಜನೆಯಡಿ ಸ್ಥಾಪಿಸಲಾದ ನಿಧಿಗಳು ಜಿಲ್ಲೆಯ ಜಿಲ್ಲಾಧಿಕಾರಿಗಳ ಸಂಪೂರ್ಣ ನಿಯಂತ್ರಣದಲ್ಲಿರತಕ್ಕದ್ದು. ನಿಧಿಗಳಿಗೆ ಸಂಬಂಧಿಸಿದ ವ್ಯವಹಾರಗಳನ್ನು ನಿರ್ವಹಿಸಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಒಂದು ಸಲಹಾ ಸಮಿತಿಯನ್ನು ಸಹ ರಚಿಸಲಾಗಿದೆ.

ಯೋಜನೆಯ ಪ್ರಮುಖ ಉದ್ದೇಶವು, ಮೂಲ ನಿಧಿಗೆ ಹೆಚ್ಚಿನ ಆದಾಯವನ್ನು ಉತ್ಪಾದಿಸಲು ಹೆಚ್ಚಿನ ಆದಾಯದ ಯೋಜನೆಯಲ್ಲಿ ಮೂಲ ನಿಧಿಯನ್ನು ಹೂಡುವುದು ಮತ್ತು ಹೀಗೆ ಗಳಿಸಿದ ಮೂಲ ಆದಾಯವನ್ನು ಅಪಾಯಕಾರಿ ವೃತ್ತಿಗಳಿಂದ ವಿಮುಕ್ತಗೊಂಡ ಬಾಲ ಕಾರ್ಮಿಕರ ಪಾಲಕರಿಗೆ ಬಟವಾಡೆ ಮಾಡುವುದಾಗಿದೆ. ಅಪಾಯಕಾರಿ ವೃತ್ತಿಗಳಿಂದ ಮುಕ್ತಗೊಳಿಸಲಾದ ದುಡಿಯುವ ಮಕ್ಕಳ ಪಾಲಕರಿಗೆ ಆದಾಯ ರೂಪದಲ್ಲಿ ಕೆಲವು ಪರಿಹಾರ ಒದಗಿಸುವುದು ಹಾಗೂ ಅವರನ್ನು ಆರ್ಥಿಕವಾಗಿ ಸ್ವಾವಲಂಬಿಗಳನ್ನಾಗಿ ಮಾಡುವುದು ಮತ್ತು ತನ್ಮೂಲಕ ಅವರು ದುಡಿಮೆಗೆ ತಮ್ಮ ಮಕ್ಕಳನ್ನು ಕಳುಹಿಸಿಕೊಡುವುದನ್ನು ತಡೆಗಟ್ಟುವಂತೆ ಮಾಡಲು ಯೋಜನೆಯ ಆಶಯವಾಗಿದೆ.

2. **ಯೋಜನೆಯ ಹೆಸರು ಹಾಗೂ ಪ್ರಾರಂಭ:-** (1) ಈ ಯೋಜನೆಯನ್ನು ಜಿಲ್ಲಾ ಬಾಲ ಕಾರ್ಮಿಕರ ಪುನರ್ವಸತಿ ಹಾಗೂ ಕಲ್ಯಾಣ ನಿಧಿ ಯೋಜನೆ ಎಂದು ಕರೆಯತಕ್ಕದ್ದು..

   (ii) ಈ ಯೋಜನೆಯು, ಅದು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ತರತಕ್ಕದ್ದು.

3. **ಪರಿಭಾಷೆಗಳು :-**

   (i) "ಅಧಿನಿಯಮ" ಎಂದರೆ ಬಾಲ ಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮ, 1986;

   (ii) ಬಾಲ ಕಾರ್ಮಿಕರ ಪುನರ್ವಸತಿ ಹಾಗೂ ಕಲ್ಯಾಣಕ್ಕೆ ಸಂಬಂಧಪಟ್ಟಂತೆ "ಸಮುಚಿತ ಸರ್ಕಾರ" ಎಂದರೆ, ರಾಜ್ಯ ಸರ್ಕಾರ;

   (iii) "ಹೆಚ್ಚಿನ ಆದಾಯ" ಎಂದರೆ, ಯಾವುದೇ ರಾಷ್ಟ್ರೀಕೃತ ಬ್ಯಾಂಕು ಅಥವಾ ಯಾವುದೇ ಇತರ ಸರ್ಕಾರಿ: ಸಾರ್ವಜನಿಕ ಉದ್ದಿಮೆ ಅಥವಾ ಸಹಕಾರಿ ಬ್ಯಾಂಕ್ ಮೊದಲಾದವುಗಳ ಅಧಿಕ ಲಾಭ ಉತ್ಪತ್ತಿ ಯೋಜನೆ;

(ಎ) ಆತನ ಅರ್ಥ ನಿಧಿಯು ಈ ಕೆಳಕಂಡವುಗಳನ್ನು ಒಳಗೊಳ್ಳುತ್ತದೆ:-

(ಎ) ಬಾಲ ಕಾರ್ಮಿಕ ಪದ್ಧತಿ (ನಿಷೇಧ ಹಾಗೂ ನಿಯಂತ್ರಣ) ಅಧಿನಿಯಮ, 1986ರ ಉಪಬಂಧಗಳನ್ನು ಉಲ್ಲಂಘಿಸಿ ಮಕ್ಕಳನ್ನು ನಿಯೋಜಿಸಿಕೊಂಡಿರುವ ತಪ್ಪಿತಸ್ಥ ನಿಯೋಜಿಸಿಕೊಂಡಿರುವ ತಪ್ಪಿತಸ್ಥ ನಿಯೋಜಕರಿಂದ ಪ್ರತಿ ಮಗುವಿಗೆ 20,000/- ರೂ. ಗಳಂತೆ ಸಂಗ್ರಹಿಸಿದ ಪರಿಹಾರ ಮೊತ್ತ.

(ಬಿ) ಅಪಾಯಕಾರಿ ಪ್ರಕ್ರಿಯೆಗಳು ಹಾಗೂ ವೃತ್ತಿಗಳಿಂದ ವಿಮುಕ್ತಿಗೊಳಿಸಲಾದ ಬಾಲ ಕಾರ್ಮಿಕನ ಕುಟುಂಬದ ವಯಸ್ಕ ಸದಸ್ಯನಿಗೆ ಉದ್ಯೋಗಾವಕಾಶ ಒದಗಿಸುವ ಬದಲಿಗೆ ಪ್ರತಿಯೊಂದು ಮಗುವಿಗೆ ಕೊಡುಗೆಯಾಗಿ ಸಮುಚಿತ ಸರ್ಕಾರದಿಂದ ಸ್ವೀಕರಿಸಿದ ಮೊತ್ತ.

(ಸಿ) ನಿಧಿಯಲ್ಲಿ ಠೇವಣಿ ಇಡಲಾದ ಮೂಲ ನಿಧಿ ಮೊತ್ತದ ಮೇಲೆ ಪ್ರಾಪ್ತವಾದ ಬಡ್ಡಿ: ಮತ್ತು

(ಡಿ) ಮೂಲ ಬಂಡವಾಳ ಧನದ ರೂಪದಲ್ಲಿ ಸರ್ಕಾರವು ಬಿಡುಗಡೆ ಮಾಡಿದ ಆರಂಭಿಕ ಅನುದಾನಗಳು, ಯಾವುದಾದರೂ ಇದ್ದಲ್ಲಿ ಈ ಅನುದಾನಗಳು.

5. <u>ಸಲಹಾ ಸಮಿತಿಯ ರಚನೆ:-</u> (1) ರಾಷ್ಟ್ರೀಯ ಬಾಲ ಕಾರ್ಮಿಕ ಪದ್ಧತಿ ಯೋಜನೆಯ ವ್ಯಾಪ್ತಿಗೊಳಪಡದ ಜಿಲ್ಲೆಗಳಲ್ಲಿ, ನಿಧಿಯ ವ್ಯವಹಾರಗಳನ್ನು ನಿರ್ವಹಿಸುವ ಉದ್ದೇಶಕ್ಕಾಗಿ ಜಿಲ್ಲಾ ಸಲಹಾ ಸಮಿತಿಯನ್ನು ಸ್ಥಾಪಿಸತಕ್ಕದ್ದು. ಸಮಿತಿಯು ಈ ಕೆಳಕಂಡ ವ್ಯಕ್ತಿಗಳನ್ನೊಳಗೊಂಡಿರತಕ್ಕದ್ದು.

| | | |
|---|---|---|
| (ಎ) | ಜಿಲ್ಲಾಧಿಕಾರಿ | ಅಧ್ಯಕ್ಷರು |
| (ಬಿ) | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ | ಉಪಾಧ್ಯಕ್ಷರು |
| (ಸಿ) | ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| (ಡಿ) | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| (ಇ) | ಕಾರ್ಖಾನೆಗಳ ಪರಿವೀಕ್ಷಣಾಧಿಕಾರಿ | ಸದಸ್ಯರು |
| (ಎಫ್) | ಕಾರ್ಮಿಕ ಅಧಿಕಾರಿ | ಸದಸ್ಯರು |
| (ಜಿ) | ಲೀಡ್ - ಬ್ಯಾಂಕಿನ ವ್ಯವಸ್ಥಾಪಕರು | ಸದಸ್ಯರು |
| (ಹೆಚ್) | ಹೆಸರಾಂತ ಸರ್ಕಾರೇತರ ಸಂಸ್ಥೆಯ ಇಬ್ಬರು ಪ್ರತಿನಿಧಿಗಳು (ಅಧ್ಯಕ್ಷರು ನಾಮನಿರ್ದೇಶನ ಮಾಡುವುದು) | ಸದಸ್ಯರು |
| (ಐ) | ಕಾರ್ಮಿಕ ಸಂಘದ ಒಬ್ಬ ಪ್ರತಿನಿಧಿ (ಅಧ್ಯಕ್ಷರು ನಾಮನಿರ್ದೇಶನ ಮಾಡುವುದು) | ಸದಸ್ಯರು |
| (ಜೆ) | ಕೇಂದ್ರ ಕಾರ್ಯಸ್ಥಳದಲ್ಲಿರುವ ಉಪ ವಿಭಾಗಾಧಿಕಾರಿ | ಸದಸ್ಯ - ಕಾರ್ಯದರ್ಶಿ. |

(ii) ನಾಮನಿರ್ದೇಶಿತ ಸದಸ್ಯರ ಪದಾವಧಿಯು ಸಾಮಾನ್ಯವಾಗಿ, ಜಿಲ್ಲಾಧಿಕಾರಿಯು ಅವರ ಹೆಸರುಗಳನ್ನು ಅಧಿಸೂಚಿಸಿದ ದಿನಾಂಕದಿಂದ ಎರಡು ವರ್ಷಗಳಾಗಿರುವುದು

(iii) ಹಣಕಾಸಿನ ನಿರ್ವಹಣೆಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಚರ್ಚಿಸಲು ಮತ್ತು ಮೂಲ ನಿಧಿಯನ್ನು ಅಧಿಕ ಉತ್ಪತ್ತಿ ಯೋಜನೆಯಲ್ಲಿ ತೊಡಗಿಸುವುದು, ಮೂಲ ನಿಧಿಯ ಸೂಕ್ತ ಮೇಲ್ವಿಚಾರಣೆ ನಡೆಸುವುದೂ ಸೇರಿದಂತೆ ಎಲ್ಲಾ ಪ್ರಕರಣಗಳ ನಿರ್ಧರಣೆ ಮಾಡಲು ಹಾಗೂ ಮೂಲ ನಿಧಿಯ ಆದಾಯವನ್ನು ಅಪಾಯಕಾರಿ ವೃತ್ತಿಗಳಿಂದ

ಮುಕ್ತಗೊಳಿಸಲಾದ ಮಕ್ಕಳ ಪಾಲಕರಿಗೆ ಬಟವಾಡೆ ಮಾಡಲು ಸಮಿತಿಯು, ತಿಂಗ,
ಸಭ ಸೇರತಕ್ಕದ್ದು.

**ಅನುಬಂಧ - ಎಫ್**

(iv) ಜಿಲ್ಲಾ ಮಟ್ಟದ ರಾಷ್ಟ್ರೀಯ ಬಾಲ ಕಾರ್ಮಿಕ ಸಮಿತಿಯ ರಚನೆಯು ಈ ಮುಂದಿನಂತಿದೆ:

| | | |
|---|---|---|
| ಎ. | ಜಿಲ್ಲಾಧಿಕಾರಿ | ಅಧ್ಯಕ್ಷರು |
| ಬಿ. | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯಿತಿ | ಸದಸ್ಯರು |
| ಸಿ. | ಉಪ ವಿಭಾಗಾಧಿಕಾರಿಗಳು ಹಾಗೂ ಉಪ-ವಿಭಾಗೀಯ ದಂಡಾಧಿಕಾರಿ | ಸದಸ್ಯರು |
| ಡಿ. | ಜಿಲ್ಲಾ ಆರೋಗ್ಯಾಧಿಕಾರಿ | ಸದಸ್ಯರು |
| ಇ. | ಜಿಲ್ಲೆಯ ಸಂಬಂಧಿತ ವಿಶ್ವವಿದ್ಯಾಲಯದ ಸಾಮಾಜಿಕ ಕಾರ್ಯವಿಭಾಗದ ಮುಖ್ಯಸ್ಥರು | ಸದಸ್ಯರು |
| ಎಫ್. | ಪ್ರಧಾನ ವ್ಯವಸ್ಥಾಪಕರು, ಜಿಲ್ಲಾ ಕೈಗಾರಿಕಾ ಕೇಂದ್ರ | ಸದಸ್ಯರು |
| ಜಿ. | ಕಾರ್ಯಾನಿರ್ವಾಹಕ ಇಂಜಿನಿಯರು, ಲೋಕೋಪಯೋಗಿ ಇಲಾಖೆ | ಸದಸ್ಯರು |
| ಹೆಚ್. | ಉಪ ನಿರ್ದೇಶಕರು, ಸಾರ್ವಜನಿಕ, ಶಿಕ್ಷಣ ಇಲಾಖೆ. | ಸದಸ್ಯರು |
| ಐ. | ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| ಜೆ. | ಕಾರ್ಮಿಕ ಅಧಿಕಾರಿ | ಸದಸ್ಯರು |
| ಕೆ. | ಜಿಲ್ಲಾ ವಾರ್ತಾ ಮತ್ತು ಪ್ರಚಾರಣಾಧಿಕಾರಿ | ಸದಸ್ಯರು |
| ಎಲ್. | ಕಾರ್ಖಾನೆಗಳ ಪರಿವೀಕ್ಷಣಾಧಿಕಾರಿ | ಸದಸ್ಯರು |
| ಎಂ. | ಹೆಸರಾಂತ ಸರ್ಕಾರೇತರ ಸಂಸ್ಥೆಗಳ ಇಬ್ಬರು ಪ್ರತಿನಿಧಿಗಳು (ಅಧ್ಯಕ್ಷರು ನಾಮನಿರ್ದೇಶನ ಮಾಡುವುದು) | ಸದಸ್ಯರು |
| ಎನ್. | ಬಾಲ ಕಾರ್ಮಿಕ ಪದ್ಧತಿಯ ನಿಷೇಧಕ್ಕೆ ಸಂಬಂಧಿಸಿದಂತೆ ಕಾಳಜಿ ಹೊಂದಿರುವ ಜಿಲ್ಲೆಯ ನಾಲ್ಕು ಗಣ್ಯ ವ್ಯಕ್ತಿಗಳು. ಆ ಪೈಕಿ ಒಬ್ಬರು ಪಜಾ:ಪಪಂ ಹಾಗೂ ಮತ್ತೊಬ್ಬರು ಮಹಿಳಾ ವರ್ಗವನ್ನು ಪ್ರತಿನಿಧಿಸುವುದು. | ಸದಸ್ಯರು |
| ಒ. | ಯೋಜನಾ ನಿರ್ದೇಶಕರು. | ಸದಸ್ಯ-ಕಾರ್ಯದರ್ಶಿ |

ರಾಷ್ಟ್ರೀಯ ಬಾಲ ಕಾರ್ಮಿಕ ಯೋಜನೆಯ ವ್ಯಾಪ್ತಿಗೊಳಪಡುವ ಜಿಲ್ಲೆಗಳಲ್ಲಿ, ಪ್ರತ್ಯೇಕ ಜಿಲ್ಲಾ ಸಲಹಾ ಸಮಿತಿಯನ್ನು ರಚಿಸುವ ಅಗತ್ಯವಿಲ್ಲ. ಸಂಬಂಧಪಟ್ಟ ಜಿಲ್ಲೆಯ ಹಾಲಿ ಯೋಜನಾ ಸಂಸ್ಥೆಯು, ಪ್ರತ್ಯೇಕ ಲೆಕ್ಕ ನಿರ್ವಹಿಸುವ ಮೂಲಕ ಮೇಲ್ಕಂಡ ನಿಧಿಯ ವ್ಯವಹಾರಗಳನ್ನು ನಿರ್ವಹಿಸತಕ್ಕದ್ದು ಹಾಗೂ ಮೇಲೆ ನಿರ್ದಿಷ್ಟವಾಗಿ ಹೇಳಲಾದ ಪ್ರಕಾರ್ಯಗಳು, ಈ ನಿಧಿಗೆ ಸಂಬಂಧವಿರುವಷ್ಟರಮಟ್ಟಿಗೆ ಈ ಸಂಸ್ಥೆಗಳಿಗೂ ಸಹ ಅನ್ವಯವಾಗುವವು.

6. <u>ಅಪಾಯಕಾರಿ ವೃತ್ತಿಗಳಿಂದ ಮುಕ್ತಗೊಳಿಸಲಾದ ಮಕ್ಕಳ ಪಾಲಕರಿಗೆ ಮೂಲ ನಿಧಿ ಆದಾಯ ನೀಡಿಕೆಗೆ ಷರತ್ತುಗಳು:</u> (1) ಜಿಲ್ಲಾಧಿಕಾರಿಯವರು, ಕೆಳಕಂಡ ಷರತ್ತುಗಳನ್ನು ಪೂರೈಸುವಂಥ ಮಕ್ಕಳ ಪಾಲಕರಿಗೆ, ಸಲಹಾ ಸಮಿತಿಯ ನಿರ್ಣಯದಂತೆ ಈ ಯೋಜನೆ ಅಡಿಯಲ್ಲಿ ಒದಗಿಸಲಾದ ಪರಿಹಾರ ಮಂಜೂರು ಮಾಡುವ ಅಧಿಕಾರವನ್ನು ಹೊಂದಿರುತ್ತಾರೆ.

(ಎ) ಆತನ ಅಥವಾ ಆಕೆಯ ಮಗುವನ್ನು, ಬಾಲ ಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮ 1986ರ ಉಪಬಂಧಗಳನ್ನು ಉಲ್ಲಂಘಿಸಿ ಅಪಾಯಕಾರಿ ವೃತ್ತಿಗಳು ಅಥವಾ ಪ್ರಕ್ರಿಯೆಗಳಲ್ಲಿ ನಿಯೋಜಿಸಿಕೊಂಡಿರತಕ್ಕದ್ದು.

(ಬಿ) ಹಾಗೆ ನಿಯೋಜಿತವಾದ ಮಗುವು ದುಡಿಮೆಯಿಂದ ಮುಕ್ತವಾಗಿರತಕ್ಕದ್ದು.

(ಸಿ) ಅಪಾಯಕಾರಿ ಉದ್ಯಮದಿಂದ ಹಾಗೆ ವಿಮುಕ್ತವಾಗಿರುವ ಮಗುವನ್ನು ಶಾಲೆಗೆ ಕಳುಹಿಸತಕ್ಕದ್ದು.

(ಡಿ) ಪ್ರಶ್ನಿತ ಮಗುವನ್ನು ನೇಮಿಸಿಕೊಂಡು ತಪ್ಪಿತಸ್ಥನಾಗಿರುವ ನಿಯೋಜಕನು ಪರಿಹಾರ ಮೊತ್ತವನ್ನು ಪಾವತಿಸಿರತಕ್ಕದ್ದು ಮತ್ತು ಅದನ್ನು ನಿಧಿಯಲ್ಲಿ ಠೇವಣಿ ಇಟ್ಟಿರತಕ್ಕದ್ದು.

ಆದರೆ, ಫಲಾನುಭವ ಪಾಲಕರಿಗೆ ಈ ಯೋಜನೆಯ ಅಡಿಯಲ್ಲಿ ನೀಡುವ ಸೌಲಭ್ಯವು, ಮಗುವಿನ ಪಾಲಕರು ಅಥವಾ ಪೋಷಕರು ಮಕ್ಕಳನ್ನು ಶಾಲೆಗೆ ಕಳುಹಿಸದಿದ್ದರೆ, ಅಥವಾ ಶಾಲೆಗೆ ಹೋಗುವುದನ್ನು ಬಿಡಿಸಿದರೆ ಚಾಲ್ತಿಯಲ್ಲಿರುವುದು ನಿಂತು ಹೋಗುವುದು.

(ii) ಉದ್ಯಮದಿಂದ ಮುಕ್ತಗೊಳಿಸಲಾದ ಬಾಲ ಕಾರ್ಮಿಕನ ಸಂಬಂಧದಲ್ಲಿ ವಂತಿಗೆಯ ತನ್ನ ಪಾಲನ್ನು ನೀಡಲು ನಿಯೋಜಕನು ವಿಫಲನಾದ ಪಕ್ಷದಲ್ಲಿ, ಅದನ್ನು ಕಂದಾಯ ಇಲಾಖೆಯ ಮುಖಾಂತರ ಭೂ ಕಂದಾಯದ ಬಾಕಿ ಎಂಬಂತೆ ವಸೂಲು ಮಾಡಲಾಗುವುದು.

(iii) ಪರಿಹಾರದ ಕನಿಷ್ಠ ಮತ್ತು ಗರಿಷ್ಠ ಮೊತ್ತವನ್ನು, ಮೂಲನಿಧಿಯ ಹೂಡಿಕೆ ಮೇಲೆ ಗಳಿಸಲಾದ ಬಡ್ಡಿ ಆಧಾರದ ಮೇಲೆ ಸಂದಾಯ ಮಾಡತಕ್ಕದ್ದು.

7. <u>ಈ ಯೋಜನೆಯ ಅಡಿಯಲ್ಲಿ ಜಿಲ್ಲಾಧಿಕಾರಿಯವರ ಅಧಿಕಾರ ಮತ್ತು ಪ್ರಕಾರ್ಯಗಳು:</u>

ಜಿಲ್ಲೆಯ ಜಿಲ್ಲಾಧಿಕಾರಿಯು, ಈ ಯೋಜನೆಯಡಿ ಸ್ಥಾಪಿಸಲಾದ ನಿಧಿಯ ವ್ಯವಹಾರಗಳ ನಿರ್ವಹಣೆಯ ಮೇಲೆ ನಿಯಂತ್ರಣ ಹೊಂದಿರತಕ್ಕದ್ದು ಮತ್ತು ಈ ಕೆಳಕಂಡ ಅಂಶಗಳು ಒಳಗೊಂಡಂತೆ ಈ ಯೋಜನೆಯಡಿ ಸ್ಥಾಪಿಸಲಾದ ಸದರಿ ನಿಧಿಯ ವ್ಯವಹಾರಗಳ ನಿರ್ವಹಣೆಗೆ ಜವಾಬ್ದಾರರಾಗಿರತಕ್ಕದ್ದು.

(i) ಸರ್ವೋಚ್ಚ ನ್ಯಾಯಾಲಯವು ತನ್ನ ತೀರ್ಪಿನಲ್ಲಿ ನೀಡಿರುವ ನಿರ್ದೇಶನಗಳನ್ನು ಅನುಷ್ಠಾನಗೊಳಿಸುವುದೂ ಸೇರಿದಂತೆ ಈ ಯೋಜನೆಯ ಉದ್ದೇಶಗಳು ಈಡೇರುವಂತೆ ನೋಡಿಕೊಳ್ಳುವುದು ಅವರ ಕರ್ತವ್ಯವಾಗಿದೆ ಮತ್ತು ಈ ಉದ್ದೇಶ ಈಡೇರಿಕೆಗಾಗಿ ಅವರು ಯುಕ್ತವೆಂದು ಭಾವಿಸುವಂಥ ಕಾರ್ಯವಿಧಾನಗಳನ್ನು ಅಳವಡಿಸಿಕೊಳ್ಳಲು ಹಾಗೂ ಅನುಸರಿಸಲು ಸೂಕ್ತ ಅಧಿಕಾರಗಳನ್ನು ಹೊಂದಿರತಕ್ಕದ್ದು.

(ii) ಅವರು ಬಾಲ ಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮ 1986ರ 17ನೇ ಪ್ರಕರಣದ ಮೇರೆಗೆ ನೇಮಕಗೊಂಡ ಪರಿವೀಕ್ಷಕರ ಕೆಲಸದ ಮೇಲ್ವಿಚಾರಣೆ ಹಾಗೂ ಮೇಲುಸ್ತುವಾರಿ ನಡೆಸತಕ್ಕದ್ದು ಮತ್ತು ಬಾಲ ಕಾರ್ಮಿಕ ಪದ್ಧತಿ (ನಿಷೇಧ ಹಾಗೂ ನಿಯಂತ್ರಣ) ಅಧಿನಿಯಮ 1986ರ ಉಪಬಂಧಗಳನ್ನು ಉಲ್ಲಂಘಿಸಿ ಮಕ್ಕಳನ್ನು ನಿಯೋಜಿಸಿಕೊಳ್ಳುವ ತಪ್ಪಿತಸ್ಥ ನಿಯೋಜಕರಿಂದ ಎಲ್ಲಾ ಪರಿಹಾರ ಹಣವನ್ನು ವಸೂಲು ಮಾಡುವುದಕ್ಕೆ ಅವಶ್ಯಕವಾದಂಥ ನಿರ್ದೇಶನಗಳನ್ನು ನೀಡುವುದು.

(iii) ಕುಟುಂಬದ ವಯಸ್ಕ ಸದಸ್ಯರೊಬ್ಬರಿಗೆ ಪರ್ಯಾಯ ಉದ್ಯೋಗವನ್ನು ಸರ್ಕಾರವು ಒದಗಿಸದ ಪಕ್ಷದಲ್ಲಿ, ಕಾರ್ಖಾನೆ ಅಥವಾ ಗಣಿ ಅಥವಾ ಯಾವುದೇ ಇತರ ಅಪಾಯಕಾರಿ ಉದ್ಯಮದಲ್ಲಿ ನಿಯೋಜಿತವಾಗಿರುವ



ಪ್ರತಿ ಮಗುವಿಗೆ 5000-00 ರೂ. ಗಳಂತೆ ಸಮುಚಿತ ಸರ್ಕಾರದಿಂದ ಅದರ ಕೊಡುಗೆಯಾಗಿ ಹಣವನ್ನು ಪಡೆಯುವುದಕ್ಕೆ ಎಲ್ಲಾ ಅಗತ್ಯ ಕ್ರಮಗಳನ್ನು ತ್ವರಿತವಾಗಿ ತೆಗೆದುಕೊಳ್ಳುವುದು.

(vi) ಸಲಹಾ ಸಮಿತಿಯಯೊಡನೆ ಸಮಾಲೋಚನೆ ನಡೆಸಿದ ತರುವಾಯ ಯಾವುದೇ ಅಧಿಕ ಉತ್ಪತ್ತಿ ತರುವ ಯೋಜನೆಯಲ್ಲಿ ಮೂಲನಿಧಿ ಮೊತ್ತವನ್ನು ತೊಡಗಿಸುವ ಅಧಿಕಾರವನ್ನೂ ಸಹ ಅವರು ಹೊಂದಿರುವರು, ಬಾಲ ಕಾರ್ಮಿಕರ ಫಲಾನುಭವಿ ಪಾಲಕರಿಗೆ ನೀಡಬೇಕಾದ ಮೊತ್ತದ ಪ್ರಮಾಣವನ್ನು ನಿರ್ಧರಿಸುವ ಅಧಿಕಾರವನ್ನು ಸಹ ಇವರು ಹೊಂದಿರುವರು ಮತ್ತು ಆ ಮೊಬಲಗಿನ ಪ್ರಮಾಣವು ಪ್ರತಿಯೊಬ್ಬ ಬಾಲ ಕಾರ್ಮಿಕನ ಪರವಾಗಿ ಠೇವಣಿ ಇಟ್ಟ ಮೂಲ ನಿಧಿಯ ಮೇಲೆ ಪ್ರಾಪ್ತವಾದ ಮೊತ್ತಕ್ಕೆ ಸಮನಾಗಿರತಕ್ಕದ್ದು ಹಾಗೂ ಆ ಮೊತ್ತವನ್ನು ಅಪಾಯಕಾರಿ ವೃತ್ತಿಗಳಿಂದ ಮುಕ್ತಗೊಂಡ ಮಕ್ಕಳ ಕುಟುಂಬಗಳಿಗೆ ಹಂಚುವ ಅಧಿಕಾರವನ್ನೂ ಸಹ ಇವರು ಹೊಂದಿರುತ್ತಾರೆ.

(V) ಜಿಲ್ಲಾಧಿಕಾಯು ತಾನು ಸೂಕ್ತವೆಂದು ಭಾವಿಸುವಂಥ ಇತರ ಅಧಿಕಾರಿಗಳ ಕೂಡ ಚಲಾಯಿಸತಕ್ಕದ್ದು.

8. <u>ಈ ಯೋಜನೆಯಡಿ ರಿಜಿಸ್ಟರ್ ನಿರ್ವಹಣೆ:-</u> (1) ಅಪಾಯಕಾರಿ ವೃತ್ತಿಗಳಿಂದ ಮುಕ್ತಗೊಂಡ ಬಾಲಕಾರ್ಮಿಕರು ಮತ್ತು ಅವರ ಹಾಗೂ ಮಗುವಿನ ಪಾಲಕರಿಗೆ ನೀಡಲಾಗುವ ಮೊತ್ತದ ಪ್ರಮಾಣ ಮತ್ತು ಇತರ ಎಲ್ಲಾ ಸಂಬಂಧಪಟ್ಟ ಅಂಶಗಳ ಬಗ್ಗೆ ವಿವರಗಳನ್ನು ನಿರ್ವಹಿಸುವ ಉದ್ದೇಶಕ್ಕೆಂದು ಜಿಲ್ಲೆಯ ಜಿಲ್ಲಾಧಿಕಾರಿಯವರ ಕಚೇರಿಯಲ್ಲಿ ಒಂದು ರಿಜಿಸ್ಟರನ್ನು ನಿರ್ವಹಿಸತಕ್ಕದ್ದು.

(ii) ಜಿಲ್ಲಾಧಿಕಾರಿಯವರು, ಮೇಲ್ಕಂಡ ವಿವರಗಳನ್ನು ಒಳಗೊಂಡ ಮಾಸಿಕ ವಿವರ ಪಟ್ಟಿಯನ್ನು ಸರ್ಕಾರದ ಕಾರ್ಯದರ್ಶಿ ಕಾರ್ಮಿಕ ಇಲಾಖೆ, ಇವರಿಗೆ ಪ್ರತಿ ತಿಂಗಳ 5ನೇ ದಿನಾಂಕದಂದು ಕಳುಹಿಸಿಕೊಡತಕ್ಕದ್ದು.

9. <u>ಲೆಕ್ಕಪರಿಶೋಧನೆ:</u> ನಿಧಿಯ ಲೆಕ್ಕಪತ್ರಗಳು ವಾರ್ಷಿಕ ಲೆಕ್ಕ ಪರಿಶೋಧನೆಯನ್ನು ರಾಜ್ಯ ಲೆಕ್ಕಪತ್ರಗಳ ನಿಯಂತ್ರಕರು ನಡೆಸತಕ್ಕದ್ದು. ನೇಮಕಗೊಂಡ ಲೆಕ್ಕಪರಿಶೋಧಕ ಅಥವಾ ಲೆಕ್ಕ ಪರಿಶೋಧಕರಿಗೆ, ಲೆಕ್ಕಪತ್ರಗಳು ಮತ್ತು ರಸೀತಿಗಳಿಗೆ ಸಂಬಂಧಿಸಿದಂತೆ ಸಮಿತಿಯು ನಿರ್ವಹಿಸಿರುವ ಎಲ್ಲಾ ಪುಸ್ತಕಗಳನ್ನು ಪರಿಶೀಲಿಸಲು ಅವಕಾಶ ನೀಡತಕ್ಕದ್ದು ಮತ್ತು ಆ ತರುವಾಯ ಆ ಲೆಕ್ಕ ಪರಿಶೋಧಕರ ಅಥವಾ ಲೆಕ್ಕ ಪರಿಶೋಧಕರು ಒಂದು ಲೆಕ್ಕಪರಿಶೋಧಕರ ಘೋಷಣೆಯನ್ನು ಬರೆದು ಅದಕ್ಕೆ ಸಹಿ ಹಾಕತಕ್ಕದ್ದು. ಸದರಿ ಘೋಷಣೆಯ ನಮೂನೆಯಲ್ಲಿ ಈ ಲೆಕ್ಕ ಪತ್ರಗಳು, ಅವುಗಳಿಗೆ ಓಚರು ಹಾಕಿರಲಿ ಅಥವಾ ಇಲ್ಲದಿರಲಿ, ಯಾವ ದೃಷ್ಟಿಯಿಂದ ತಪ್ಪು ಎಂದು ತಮಗೆ ಕಂಡು ಬಂದಿದೆ ಎಂಬುದನ್ನು ತೋರಿಸುವ ಒಂದು ಹೇಳಿಕೆಯನ್ನು ಬರೆದು ಅದಕ್ಕೆ ತನ್ನ ಅಥವಾ ತಮ್ಮ ಸಹಿ ಹಾಕತಕ್ಕದ್ದು. ಸದರಿ ಹೇಳಿಕೆಯಲ್ಲಿ ನೀಡಿರುವ ವಿವರಗಳು ಈ ಕೆಳಕಂಡವುಗಳನ್ನು ಸೂಚಿಸತಕ್ಕದ್ದು.

(ಎ) ಅನಧಿಕೃತ ಅಥವಾ ಯೋಜನೆಯ ಉಪಬಂಧಗಳಿಗೆ ಪ್ರತಿಕೂಲವಾದುದೆಂದು ಕಂಡುಬರುವ ಪ್ರತಿಯೊಂದು ಸಂದಾಯ

(ಬಿ) ಯಾವುದೇ ವ್ಯಕ್ತಿಯ ನಿರ್ಲಕ್ಷತೆ ಅಥವಾ ಅವಿವೇಕದಿಂದ ಉಂಟಾಗಿದೆ ಎಂದು ಕಂಡುಬರುವ ಯಾವುದೇ ಕೊರತೆ ಅಥವಾ ನಷ್ಟದ ಮೊತ್ತ ಮತ್ತು

(ಸಿ) ಯಾವುದೇ ವ್ಯಕ್ತಿಯು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾಗಿದ್ದ, ಆದರೆ ಹಾಗೆ ತೆಗೆದುಕೊಂಡಿರದ, ಯಾವುದೇ ಮೊತ್ತ.

ಅನುಬಂಧ - ಜೆ

## ರಾಜ್ಯ ಬಾಲ ಕಾರ್ಮಿಕ ಯೋಜನೆಯಡಿ ವಿಶೇಷ ವಸತಿ ಶಾಲೆಗೆ ಕಲ್ಪಿಸಿರುವ ಆಯವ್ಯಯ

## (ಎಸ್‌ಸಿಎಲ್‌ಪಿ) (ಪ್ರತಿ ವರ್ಷಕ್ಕೆ 50 ಮಕ್ಕಳಿರುವ ಒಂದು ಶಾಲೆ

ಮೊತ್ತ ರೂ. ಗಳಲ್ಲಿ

| | | |
|---|---|---|
| 1. | ಬೋಧಕರಿಗೆ (ಶಿಕ್ಷಕರು) ಗೌರವಧನ | |
| | (ಎ) ಶೈಕ್ಷಣಿಕ | |
| | 2 X 1500 X 12 | 36,000 |
| | (ಬಿ) ವೃತ್ತಿಪರ | |
| | 1 X 1500 X 12 | 18,000 |
| 2. | ಗುಮಾಸ್ತ ಹಾಗೂ ಲೆಕ್ಕಿಗ<br>1 X 1,400 X 12 | 16,800 |
| 3. | ಜವಾನ (ಸಹಾಯಕ)<br>(1 X 800 X 12) | 9,600 |
| 4. | ಊಟೋಪಚಾರದ ವೆಚ್ಚಗಳು (ಉಪಹಾರ, ಊಟ ಹಾಗೂ ಭೋಜನ - ಇವುಗಳ ಪ್ರಮಾಣವು ಸಮಾಜ ಕಲ್ಯಾಣ ಇಲಾಖೆ ವತಿಯಿಂದ ನಡೆಯುತ್ತಿರುವ ವಿದ್ಯಾರ್ಥಿನಿಲಯಗಳಿಗೆ ನಿರ್ದಿಷ್ಟಪಡಿಸಲಾಗಿರುವಂತೆ ಇರತಕ್ಕದ್ದು. ಊಟೋಪಚಾರದ ವೆಚ್ಚಗಳು ಪ್ರತಿ ಮಗುವಿಗೆ ಪ್ರತಿ ತಿಂಗಳ 375 - ರೂ.ಗಳು)<br>(375 X 50 X 12) | 2,25,000 |
| 5. | ಬಾಡಿಗೆ, ನೀರು ಮತ್ತು ವಿದ್ಯುಚ್ಛಕ್ತಿ<br>(ಶಾಲೆ ಹಾಗೂ ವಸತಿ ಕಟ್ಟಡಕ್ಕೆ)<br>(2,300 X 12) | 27,600 |
| 6. | ಆರೋಗ್ಯ ರಕ್ಷಣೆ (ಸರ್ಕಾರಿ ಆಸ್ಪತ್ರೆಗಳು) | |
| 7. | ಶೈಕ್ಷಣಿಕ ಹಾಗೂ ವೃತ್ತಿ ಸಂಬಂಧಿ ಸಾಮಗ್ರಿ (ಟಿಪ್ಪಣಿ: ಸರ್ಕಾರಿ ಇಲಾಖೆ ಅಥವಾ ಇತರ ಏಜೆನ್ಸಿಗಳು ಸಾಮಗ್ರಿಯನ್ನು ಸರಬರಾಜು ಮಾಡುವಲ್ಲೆಲ್ಲ ಈ ಮೊತ್ತವನ್ನು ನೀಡಲಾಗುವುದಿಲ್ಲ.) | 8,000 |
| 8. | ಒಂದು ಜೊತೆ ಸಮವಸ್ತ್ರ, ರಗ್ಗು, ಮಗ್ಗುಲು, ಹಾಸಿಗೆ, ಚಾಪೆ, ಸೋಪು, ಎಣ್ಣೆ ಇತ್ಯಾದಿ<br>(300 X 50) | 15,000 |
| 9. | ಸಾದಿಲ್ವಾರು ವೆಚ್ಚಗಳು (ಪಾತ್ರೆಪರಟೆಗಳು, ಬಲ್ಬ್‌ಗಳ ಬದಲಾವಣೆ, ಸೀಮೆಸುಣ್ಣ ಇತ್ಯಾದಿಗಳು) | 4,000 |
| | ಒಟ್ಟು | 3,60,000 |

<u>ಪ್ರತಿ ಮಗುವಿಗೆ ಪ್ರತಿ ತಿಂಗಳಿಗೆ 600/- ರೂಪಾಯಿಗಳೆಂದು ಲೆಕ್ಕಹಾಕಲಾಗಿದೆ.</u>

ಟಿಪ್ಪಣಿ: ಎನ್‌ಸಿಎಲ್‌ಪಿ ವಿಶೇಷ ಶಾಲೆಯನ್ನು ವಿಶೇಷ ವಸತಿ ಶಾಲೆಯನ್ನಾಗಿ ಪರಿವರ್ತಿಸಿದಾಗ, ಮೇಲ್ಕಂಡ ಮಾರ್ಗದರ್ಶಕ ಸೂತ್ರಗಳನ್ನು ಮಾತ್ರ ಅನುಸರಿಸುವುದು. ವ್ಯತ್ಯಸ್ತ ಮೊತ್ತವನ್ನು ರಾಜ್ಯ ಸರ್ಕಾರವು ಭರಿಸುವುದು.

ಅನುಬಂಧ - ಹೆಚ್

## ನಿಧಿಗಳ ಬಿಡುಗಡೆ:

### 1. ಸರ್ಕಾರದಿಂದ ಜಿಲ್ಲಾ ಯೋಜನಾ ಸಂಘಕ್ಕೆ (ಡಿಪಿಎಸ್) ನಿಧಿಗಳ ಬಿಡುಗಡೆ.

(1) ಹಣಕಾಸು ವರ್ಷಕ್ಕೆ ನಿಧಿಗಳ ಬಿಡುಗಡೆಯನ್ನು ಮೂರು ಸಮಾನ ಕಂತುಗಳಲ್ಲಿ ಮಾಡಲಾಗುವುದು.

(2) ಯೋಜನೆಯನ್ನು ಹಣಕಾಸು ವರ್ಷದಲ್ಲಿ ಮುಂದುವರಿಸಲು ಪ್ರಸ್ತಾಪಿಸಿದ ಪಕ್ಷದಲ್ಲಿ, ಏಪ್ರಿಲ್ - ಜುಲೈ ತಿಂಗಳಿಗೆ ಮೊದಲ ಕಂತಿನ ಹಣವನ್ನು ಏಪ್ರಿಲ್ ತಿಂಗಳಿನಲ್ಲಿ ಬಿಡುಗಡೆ ಮಾಡಲಾಗುವುದು. ಹೊಸ ಯೋಜನೆಗಳ ಸಂಬಂಧದಲ್ಲಿ ಪ್ರಸ್ತಾವಕ್ಕೆ ಮಂಜೂರಾತಿ ನೀಡಿದ ಕೂಡಲೇ ಬಿಡುಗಡೆ ಮಾಡಲಾಗುವುದು.

(3) ಆಗಸ್ಟ್ - ನವೆಂಬರ್‌ನಿಂದ ಎರಡನೇ ಕಂತಿನ ಹಣವನ್ನು, ಕಳೆದ ಹಣಕಾಸು ವರ್ಷಕ್ಕೆ ಲೆಕ್ಕಪರಿಶೋಧಿತ ಲೆಕ್ಕಪತ್ರಗಳು ಹಾಗೂ ಜೂನ್ 30ರವರೆಗಿನ ತ್ರೈಮಾಸಿಕ ಪ್ರಗತಿ ವರದಿಗಳನ್ನು ಪಡೆದ ನಂತರ ಬಿಡುಗಡೆ ಮಾಡಲಾಗುವುದು.

(4) ಡಿಸೆಂಬರ್‌ನಿಂದ ಮಾರ್ಚ್‌ವರೆಗಿನ ಮೂರನೇ ಕಂತಿನ ಮೊತ್ತವನ್ನು, ಕಳೆದ ಹಣಕಾಸು ವರ್ಷದ ವೆಚ್ಚದ ವಿವರಪಟ್ಟಿ (ಅನುಬಂಧ - ಆರ್) ಜೊತೆಗೆ ಪ್ರಸಕ್ತ ವರ್ಷದ ಮೊದಲ ಮೂರು ತ್ರೈಮಾಸಿಕ ಅವಧಿಗೆ ಪ್ರಗತಿ ವರದಿಗಳನ್ನು ಪಡೆದ ನಂತರ ಬಿಡುಗಡೆ ಮಾಡಲಾಗುವುದು.

### II. ಡಿಪಿಎಸ್‌ನಿಂದ ಸರ್ಕಾರೇತರ ಸಂಸ್ಥೆಗಳು/ ಅಥವಾ ಇತರ ಸಂಸ್ಥೆಗಳಿಗೆ ಈ ಕೆಳಕಂಡ ರೀತಿಯಲ್ಲಿ ನಿಧಿಗಳ ಬಿಡುಗಡೆ:

| ತ್ರೈಮಾಸಿಕ ಕಂತುಗಳು | ಯಾವಾಗ ಬಿಡುಗಡೆ ಮಾಡುವುದು |
|---|---|
| ಮೊದಲ ಕಂತು (ಏಪ್ರಿಲ್ - ಜುಲೈ) | ವಸತಿ ಶಾಲೆಯನ್ನು ಪ್ರಾರಂಭಿಸಲು ಸಂಸ್ಥೆಯಿಂದ ಒಪ್ಪಿಗೆ ಪಡೆದ ಮೇಲೆ ಅಥವಾ ಜಿಲ್ಲಾಧಿಕಾರಿಯು ಯುಕ್ತವೆಂದು ಪರಿಗಣಿಸಿದ ತರುವಾಯ. |
| ಎರಡನೇ ಕಂತು (ಆಗಸ್ಟ್ - ನವೆಂಬರ್) | ಯೋಜನೆಯನ್ನು ಪ್ರಾರಂಭಿಸಿದ ವಾಸ್ತವಿಕ ದಿನಾಂಕ ಕುರಿತ ಮಾಹಿತಿ ದೊರೆತ ಮೇಲೆ ಹಾಗೂ ಈಗಾಗಲೇ ಬಿಡುಗಡೆ ಮಾಡಿದ ನಿಧಿಗಳಲ್ಲಿ ಶೇ. 75 ರಷ್ಟು ಬಳಕೆ ಮಾಡಿದ ತರುವಾಯ. |
| ಮೂರನೇ ಕಂತು (ಡಿಸೆಂಬರ್ - ಮಾರ್ಚ್ | ಹಣಕಾಸು ವರ್ಷದ I ಮತ್ತು II ತ್ರೈಮಾಸಿಕ ಅವಧಿಗೆ ಪ್ರಗತಿ ವರದಿಗಳನ್ನು ಸ್ವೀಕರಿಸಿದ ತರುವಾಯ ಹಾಗೂ ವರ್ಷಾವಧಿಯಲ್ಲಿ ಈ ಮುಂಚೆ ಬಿಡುಗಡೆ ಮಾಡಲಾದ ಕಂತುಗಳ ಬಳಕೆ ತರುವಾಯ |

ಸರ್ಕಾರೇತರ ಸಂಸ್ಥೆಗಳು: ಅನುಷ್ಠಾನ ಏಜೆನ್ಸಿಗಳು, ನಿಧಿಗಳನ್ನು ಬಿಡುಗಡೆ ಮಾಡುವಂತೆ ಕೋರಿ ಜಿಲ್ಲಾ ಯೋಜನಾ ಸಂಸ್ಥೆಗೆ (ಡಿಪಿಎಸ್) ಮನವಿ ಪತ್ರ ಸಲ್ಲಿಸತಕ್ಕದ್ದು.ಡಿಪಿಎಸ್: ಡಿಸಿಯು, ಅಂತಹ ಮಂಜೂರಾತಿಗಳಲ್ಲಿ ವಿಧಿಸಲಾದಂಥ ನಿಬಂಧನೆಗಳು ಹಾಗೂ ಷರತ್ತುಗಳಿಗೊಳಪಟ್ಟು ನಿಧಿಗಳನ್ನು ಬಿಡುಗಡೆ ಮಾಡಬಹುದಾಗಿದೆ. ಯೋಜನೆಯ ನವೀಕರಣ: ಮುಂದುವರಿಕೆಗಾಗಿ, ಅರ್ಜಿದಾರನು, ಯೋಜನೆಯನ್ನು ಮುಂದುವರಿಸುವುದಕ್ಕೆ ಡಿಪಿಎಸ್‌ನಿಂದ ಅಗತ್ಯ ಅನುಮೋದನೆ ಪಡೆಯಲು ಮೂರು ತಿಂಗಳ ಮುಂಚಿತವಾಗಿಯೇ ಅರ್ಜಿ ಸಲ್ಲಿಸಬೇಕು.

ನೆರವಿನ ಅವಧಿಯು ಪ್ರತಿಯೊಂದು ಯೋಜನೆಯನ್ನು ಅವಲಂಬಿಸಿರುವುದು ಮತ್ತು ಅದು ಸಾಮಾನ್ಯವಾಗಿ 6 ವರ್ಷಗಳ ಗರಿಷ್ಠ ಅವಧಿಯದಾಗಿರುತ್ತದೆ. ಆದರೆ ಮಂಜೂರಾತಿಯನ್ನು ವರ್ಷದಲ್ಲಿ ಒಮ್ಮೆ ಗರಿಷ್ಠ 12 ತಿಂಗಳ ಅವಧಿಗೆ ಮಾಡಲಾಗುವುದು. ವರ್ಷದ ತರುವಾಯ ಯೋಜನೆಯ ನವೀಕರಣವು, ನಿರ್ದಿಷ್ಟಪಡಿಸಿದ ನಿಬಂಧನೆಗಳು ಹಾಗೂ ಷರತ್ತುಗಳ ಈಡೇರಿಕೆಗೆ ಒಳಪಟ್ಟಿರುತ್ತದೆ. ಮುಂದುವರಿಸಲು ಪ್ರಸ್ತಾವಿಸಿರುವ ಯಾವುದೇ ಯೋಜನೆಯನ್ನು, ಪರಿಶೋಧಿಸುವುದು: ಮೌಲ್ಯ ನಿರ್ಧರಣೆ ಮಾಡುವುದು ಅಗತ್ಯವಿದೆ. ಅಂತಹ ಮೌಲ್ಯ ನಿರ್ಧರಣೆ ಪ್ರಗತಿಯಲ್ಲಿರುವಾಗ, ಯೋಜನೆಗೆ ಹಣಕಾಸು ನೀಡಿಕೆಯು, ಸಾಮಾನ್ಯವಾಗಿ ಮುಂದುವರೆಯುವುದು.

ಅನುಬಂಧ - ಐ

## ಜಿಲ್ಲಾ ಯೋಜನೆ ಸಂಘಗಳ ಪರಿವೀಕ್ಷಣಾ ವರದಿಯ ನಮೂನೆ

### 1. ಸಾಮಾನ್ಯ ಮಾಹಿತಿ:

1. ಪರಿವೀಕ್ಷಣಾಧಿಕಾರಿಯ ಹೆಸರು, ಪದನಾಮ ಮತ್ತು ವಿಳಾಸ: ...............

2. ಜಿಲ್ಲಾ ಯೋಜನಾ ಸಂಸ್ಥೆ ಪ್ರಾರಂಭದ ದಿನಾಂಕ: ..............

3. ನಡೆಸುತ್ತಿರುವ ಶಾಲೆಗಳ ಸಂಖ್ಯೆ;

   (ಎ) ಸರ್ಕಾರೇತರ ಸಂಸ್ಥೆಗಳು ......................

   (ಬಿ) ಯೋಜನಾ ಸಂಸ್ಥೆ ........................

   (ಸಿ) ಒಟ್ಟು ......................

### II. ಗುರಿ ಮತ್ತು ವ್ಯಾಪ್ತಿ:

4. ಯೋಜನೆಯ ವ್ಯಾಪ್ತಿಗೊಳಪಟ್ಟ ಮಕ್ಕಳ ಸಂಖ್ಯೆ      ಕಳೆದ ವರ್ಷಾವಧಿಯಲ್ಲಿ ಪ್ರಸಕ್ತ ವರ್ಷದಲ್ಲಿ [ಹಣಕಾಸು ವರ್ಷ]

5. ವಿಶೇಷ ಶಾಲೆಗಳನ್ನು ಮಧ್ಯದಲ್ಲಿಯೇ ಬಿಟ್ಟುಬಿಟ್ಟ ಮಕ್ಕಳ ಸಂಖ್ಯೆ;

6. ಮುಖ್ಯವಾಹಿನಿ ಶಿಕ್ಷಣಕ್ಕೆ ಸೇರಿದ ಮಕ್ಕಳ ಸಂಖ್ಯೆ

### III. ಕಲ್ಯಾಣ ಪರಿಕರಗಳು:

7. ಅನುಷ್ಠಾನಗೊಳಿಸಲಾಗಿದೆ ಎಂದು ಕಂಡು ಬಂದ ಚಟುವಟಿಕೆಗಳು :

   ಎ) ಅನೌಪಚಾರಿಕ ಶಿಕ್ಷಣ :

   ಬಿ) ಆರೋಗ್ಯ ರಕ್ಷಣೆ :

   ಸಿ) ಆಹಾರ ಮತ್ತು ಪೌಷ್ಠಿಕತೆ :

   ಡಿ) ವೃತ್ತಿ ತರಬೇತಿ :

   ಇ) ಇತರೆ (ಸ್ಪಷ್ಟಪಡಿಸಿ) :

(ಟಿಪ್ಪಣಿ : ಮೇಲ್ಕಂಡ ಬಾಬುಗಳ ಬಗ್ಗೆ ಸಂಕ್ಷಿಪ್ತವಾಗಿ ನಮೂದಿಸಿ)

## IV. ಯೋಜನೆಯ ನಿರ್ವಹಣೆ:

8. ಯೋಜನಾ ನಿರ್ದೇಶಕರ ಹೆಸರು.................... ಪೂರ್ಣಾವಧಿ ಅರೆಕಾಲಿಕ (ಗುರುತು ಮಾಡಿ)

9. ಈ ಕೆಳಕಂಡವರು ಆರು ತಿಂಗಳ ಅವಧಿಯಲ್ಲಿ ಪರಿವೀಕ್ಷಣೆ ನಡೆಸಿದ ಶಾಲೆಗಳ ಸಂಖ್ಯೆ ಎಷ್ಟು?

   ಎ. ಯೋಜನಾ ನಿರ್ದೇಶಕರು .....................

   ಬಿ. ಕ್ಷೇತ್ರಾಧಿಕಾರಿ .........................

10. ಲೆಕ್ಕಪತ್ರಗಳನ್ನು ತಹಲ್‌ವರೆಗೆ ನಿರ್ವಹಿಸಲಾಗಿದೆಯೇ ?

   (ದಯವಿಟ್ಟು ಸಂಕ್ಷಿಪ್ತವಾಗಿ ನಮೂದಿಸಿ)

11.ತಹಲ್‌ವರೆಗೆ ತ್ರೈಮಾಸಿಕ: ಅರ್ಧವಾರ್ಷಿಕ: ವಾರ್ಷಿಕ ವರದಿಗಳನ್ನು ಸಲ್ಲಿಸಲಾಗಿದೆಯೆ?

12. ವಿಶೇಷ ವಸತಿ ಶಾಲೆಗಳಲ್ಲಿ ಸೇರ್ಪಡೆಯಾಗಿರುವ ಎಲ್ಲಾ ಮಕ್ಕಳನ್ನು ದುಡಿಮೆಯಿಂದ ಔಪಚಾರಿಕವಾಗಿ ಮುಕ್ತಗೊಳಿಸಲಾಗಿದೆಯೇ? ಹೌದು : ಇಲ್ಲ:

   (ಇಲ್ಲ ಎಂದಾದರೆ, ದುಡಿಮೆಯಿಂದ ಔಪಚಾರಿಕವಾಗಿ ಮುಕ್ತಗೊಳಿಸದ, ಎಂದರೆ, ಶಾಲೆಯನ್ನು ಅರ್ಧಕ್ಕೆ ಬಿಟ್ಟುಬಿಟ್ಟಿರುವ ಹಾಗೂ ಶಾಲೆಗೆ ಹೋಗದ ಮೊದಲಾದಂತಹ ಮಕ್ಕಳ ಪ್ರಮಾಣವನ್ನು ಸ್ಪಷ್ಟಪಡಿಸಿ).

13. ಯೋಜನೆಯು ದುಡಿಯುವ ಮಕ್ಕಳಿಗೆ ಪುನರ್ವಸತಿ ಕಲ್ಪಿಸುವ ಉದ್ದೇಶವನ್ನು ಈಡೇರಿಸುವುದೆಂದು ನೀವು ಭಾವಿಸುವಿರಾ? ಹೌದೆಂದಾದರೆ ಎಷ್ಟರಮಟ್ಟಿಗೆ?

## VI ಅಡೆತಡೆಗಳು:

14. ಯೋಜನೆಯ ಸುಗಮ ಕಾರ್ಯನಿರ್ವಹಣೆಯಲ್ಲಿ ಕಂಡುಬರುವ ಪ್ರಮುಖ ಅಡೆತಡೆಗಳು ಯಾವುವು:

## VII ಇತರೆ:

15. ಯೋಜನೆಯ ಕಾರ್ಯನಿರ್ವಹಣೆ ಸಾಮಾನ್ಯ ವೀಕ್ಷಣೆ ಹಾಗೂ ಸಮಗ್ರ ಮೌಲ್ಯ ನಿರ್ಧರಣೆ:

16. ಯೋಜನೆಯ ಕಾರ್ಯನಿರ್ವಹಣೆಯಲ್ಲಿ ಸುಧಾರಣೆ ತರುವ ಕುರಿತು ಪರಿವೀಕ್ಷಣಾಧಿಕಾರಿಯ ಶಿಫಾರಸ್ಸು:

ಪರಿವೀಕ್ಷಣಾಧಿಕಾರಿಯ ಸಹಿ

ವಿ. ಸೂ: ಅಗತ್ಯವೆನಿಸಿದರೆ ಪೇಪರಿನ ಹೆಚ್ಚುವರಿ ಶೀಟನ್ನು ಬಳಸಿ.

ಅನುಬಂಧ - ಜೆ

<u>ಸರ್ಕಾರೇತರ ಸಂಸ್ಥೆ: ಪುನರ್ವಸತಿ ಕೇಂದ್ರಗಳು: ವಿಶೇಷ ವಸತಿ ಶಾಲೆಗಳ ಪರಿವೀಕ್ಷಣಾ ವರದಿಯ ನಮೂನೆ</u>

**1. ಸಾಮಾನ್ಯ ಮಾಹಿತಿ:**

1. ಪರಿವೀಕ್ಷಣಾಧಿಕಾಯ ಹೆಸರು, ಪದನಾಮ ಮತ್ತು ವಿಳಾಸ: ...............

2. ಸರ್ಕಾರೇತರ ಸಂಸ್ಥೆ: ಪುನರ್ವಸತಿ ಹಾಗೂ ವಿಶೇಷ ವಸತಿ ಶಾಲೆಗಳ ಹೆಸರು ಮತ್ತು ವಿಳಾಸ:

3. ಯೋಜನೆಯ ಆರಂಭದ ದಿನಾಂಕ:

4. ಸರ್ಕಾರೇತರ ಸಂಸ್ಥೆಗಳು ನಡೆಸುತ್ತಿರುವ ಶಾಲೆಗಳ ಸಂಖ್ಯೆ:

**II. ಗುರಿ ಮತ್ತು ವ್ಯಾಪ್ತಿ :**

1. ದಾಖಲಾದ ಮಕ್ಕಳ ಸಂಖ್ಯೆ ಕಳೆದ ವರ್ಷಾವಧಿ (ಹಣಕಾಸಿನ ವರ್ಷ) ಪ್ರಸಕ್ತ ವರ್ಷ

2. ಮಧ್ಯದಲ್ಲಿ ಶಾಲೆ ಬಿಟ್ಟ ಮಕ್ಕಳ ಸಂಖ್ಯೆ;

6. ಮುಖ್ಯವಾಹಿನಿ ಶಿಕ್ಷಣಕ್ಕೆ ಸೇರ್ಪಡೆಯಾದ ಮಕ್ಕಳ ಸಂಖ್ಯೆ:

**III. ಕಲ್ಯಾಣ ಪರಿಕರಗಳು:**

1. ಅನುಷ್ಠಾನಗೊಳಿಸಲಾಗಿದೆ ಎಂದು ಕಂಡು ಬಂದ ಚಟುವಟಿಕೆಗಳು :

ಎ) ಅನೌಪಚಾರಿಕ ಶಿಕ್ಷಣ :

ಬಿ) ಆರೋಗ್ಯ ರಕ್ಷಣೆ :

ಸಿ) ಆಹಾರ ಮತ್ತು ಪೌಷ್ಠಿಕತೆ :

ಡಿ) ವೃತ್ತಿ ತರಬೇತಿ :

ಇ) ಇತರೆ (ಸ್ಪಷ್ಟಪಡಿಸಿ) :

**IV. ಯೋಜನೆಯ ನಿರ್ವಹಣೆ:**

1. ಯೋಜನಾ ಸಮನ್ವಯಾಧಿಕಾರಿಯ ಹೆಸರು.................... ಪೂರ್ಣಾಕಾಲಿಕ:ಅರೆಕಾಲಿಕ (ಗುರುತು ಮಾಡಿ)

2. ಲೆಕ್ಕಪತ್ರಗಳನ್ನು ತಹಲ್‌ವರೆಗೆ ನಿರ್ವಹಿಸಲಾಗಿದೆಯೇ?

(ಸಂಕ್ಷಿಪ್ತವಾಗಿ ನಮೂದಿಸಿ)

3. ತ್ರೈಮಾಸಿಕ: ಅರ್ಧವಾರ್ಷಿಕ: ವಾರ್ಷಿಕ ವರದಿಗಳನ್ನು ತಹಲ್‌ವರೆಗೆ ಸಲ್ಲಿಸಲಾಗಿದೆಯೇ?

**V ಸೇರ್ಪಡೆಯಾದ ಎಲ್ಲಾ ಮಕ್ಕಳನ್ನು ದುಡಿಮೆಯಿಂದ ಔಪಚಾರಿಕವಾಗಿ ಮುಕ್ತಗೊಳಿಸಲಾಗಿಯೇ? ಹೌದು: ಇಲ್ಲ.** ಎಂದಾದರೆ, ದುಡಿಮೆಯಿಂದ ಔಪಚಾರಿಕವಾಗಿ ಮುಕ್ತಗೊಳಿಸದ ಎಂದರೆ, ಮಧ್ಯದಲ್ಲಿ ಶಾಲೆ ಬಿಟ್ಟ ಮತ್ತು ಶಾಲೆಗೆ ಹೋಗದಿರುರ, ಮೊದಲಾದಂಥ ಮಕ್ಕಳ ಪ್ರಮಾಣವನ್ನು ಸ್ಪಷ್ಟಪಡಿಸಿ).

**VI** ಯೋಜನೆಯು ದುಡಿಯುವ ಮಕ್ಕಳಿಗೆ ಪುನರ್ವಸತಿ ಕಲ್ಪಿಸುವ ಉದ್ದೇಶವನ್ನು ಈಡೇರಿಸುವುದೆಂದು ನೀವು ಭಾವಿಸುವಿರಾ? ಹೌದೆಂದು ಎಷ್ಟರ ಮಟ್ಟಿಗೆ ?

**VII ಅಡೆತಡೆಗಳು:**

ಯೋಜನೆಯ ಸುಗಮ ಕಾರ್ಯನಿರ್ವಹಣೆಯಲ್ಲಿ ಉಂಟಾಗುವ ಮುಖ್ಯ ಅಡೆತಡೆಗಳಾವುವು?

**VII <u>ಇತರೆ:</u>**

1. ಯೋಜನೆಯ ಕಾರ್ಯನಿರ್ವಹಣೆ ಸಾಮಾನ್ಯ ವೀಕ್ಷಣೆ ಮತ್ತು ಸಮಗ್ರ ಮೌಲ್ಯ ನಿರ್ಧರಣೆ:

2. ಯೋಜನೆಯ ಕಾರ್ಯನಿರ್ವಹಣೆಯಲ್ಲಿ ಸುಧಾರಣೆ ತರುವ ಬಗ್ಗೆ ಪರಿವೀಕ್ಷಣಾಧಿಕಾರಿಯ ಶಿಫಾರಸ್ಸು:

ಪರಿವೀಕ್ಷಣಾಧಿಕಾರಿಯ ಸಹಿ

**ವಿ. ಸೂ: ಅಗತ್ಯವೆನಿಸಿದರೆ ಪೇಪರಿನ ಹೆಚ್ಚುವರಿ ಶೀಟನ್ನು ಬಳಸಿ.**

ಅನುಬಂಧ - 'ಕ'

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರ ಇಲಾಖೆ ವತಿಯಿಂದ ನಡೆಯುತ್ತಿರುವ ವಿದ್ಯಾನಿಲಯಗಳಲ್ಲಿ ಬಾಲ ಕಾರ್ಮಿಕರಿಗೆ ಪ್ರವೇಶಾವಕಾಶ - ಆದೇಶ ಹೊರಡಿಸುವ ಕುರಿತು.

ಓದಲಾಮುದು: 1) ಸರ್ಕಾರಿ ಆದೇಶ ಸಂಖ್ಯೆ ಎಸ್‌ಎಕೆಎಐ 271 ಪಿಎಕೆಎಂಐ 95 ದಿನಾಂಕ: 18-12-95 ಮತ್ತು ಸರ್ಕಾರಿ ಆದೇಶ ಸಂಖ್ಯೆ ಎಸ್‌ಎಕೆಎಐ 478 ಪಿಎಕೆಎಪಿಐ 96 ದಿನಾಂಕ 14-11-1996

2) ಸರ್ಕಾರಿ ಆದೇಸ ಸಂಖ್ಯೆ: ಎಸ್‌ಐಕೆಎಐ 206 ಬಿಎಂಎಸ್ 86 ದಿನಾಂಕ 14-11-90 ಹಾಗೂ ಸರ್ಕಾರಿ ಆದೇಶ ಸಂಖ್ಯೆ ಎಸ್‌ಎಕೆಎಐ 206 ಬಿಎಂಎಸ್ 96 (ಭಾಗ) ದಿನಾಂಕ 30-10-98.

3) ಕಾರ್ಮಿಕ ಆಯುಕ್ತರು, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಇಸಿಎಲ್: ಸಿಆರ್ -46: 98-99 ದಿನಾಂಕ 5-5-99.

ಪ್ರಸ್ತಾವನೆ:

ಉಲ್ಲೇಖ 1ರ ಅಡಿ ಉಲ್ಲೇಖಿಸಲಾದ ಸರ್ಕಾರಿ ಆದೇಶದ ಮೇರೆಗೆ, ಸಮಾಜ ಕಲ್ಯಾಣ ಇಲಾಖೆ ವತಿಯಿಂದ ನಡೆಸುವ ಸರ್ಕಾರಿ ಹಾಗೂ ಅನುದಾನಿತ ಮೆಟ್ರಿಕ್ ಪೂರ್ವ ಹಾಸ್ಟೆಲ್‌ಗಳಲ್ಲಿ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸಲು ಜಿಲ್ಲಾ ಮಟ್ಟದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯಿತಿ ಸಮಿತಿಯ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ಸಮಿತಿಗಳನ್ನು ರಚಿಸಲಾಗಿದೆ.

ಉಲ್ಲೇಖ 2ರ ಅಡಿ ಉಲ್ಲೇಖಿಸಲಾದ ಸರ್ಕಾರಿ ಆದೇಶದ ಮೇರೆಗೆ ಸಮಾಜ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಇಲಾಖೆಯ ವತಿಯಿಂದ ನಡೆಯುತ್ತಿರುವ ಸರ್ಕಾರಿ ಮತ್ತು ಅನುದಾನಿತ ವಿದ್ಯಾರ್ಥಿನಿಲಯಗಳಲ್ಲಿ ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಸಮುದಾಯಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸುವ ಸಲುವಾಗಿ, ಜಿಲ್ಲಾ ಮಟ್ಟದಲ್ಲಿ ಮುಖ್ಯ ಕಾರ್ಯನಿರ್ವಣಾಧಿಕಾರಿಯ ಅಧ್ಯಕ್ಷತೆಯಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ ವಿಧಾನಸಭಾ ಸದಸ್ಯರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದೆ.

ಉಲ್ಲೇಖ 3ರ ಅಡಿಯಲ್ಲಿ ಉಲ್ಲೇಖಿಸಲಾದ ಅರೆ ಸರ್ಕಾರಿ ಪತ್ರದ ಮೇರೆಗೆ, ಕರ್ನಾಟಕ ಕಾರ್ಮಿಕ ಆಯುಕ್ತರು, ಬೆಂಗಳೂರು ಇವರು ಅಪಾಯಕಾರಿ ಹಾಗೂ ಅಪಾಯಕಾರಿಯಲ್ಲದ ಉದ್ಯಮಗಳಿಂದ ಮುಕ್ತಗೊಳಿಸಲಾದ ಮಕ್ಕಳಿಗೆ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳಿಗನುಸಾರ ಔಪಚಾರಿಕ ಮತ್ತು ಅನೌಪಚಾರಿಕ ಶಾಲೆಗಳಲ್ಲಿ ಪ್ರವೇಶಾವಕಾಶ ಕಲ್ಪಿಸುವುದು ಅಗತ್ಯವಾಗಿದೆ ಎಂದು ತಿಳಿಸಿದ್ದಾರೆ. ಅಲ್ಲದೆ ಅವರು, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತ ಸಮುದಾಯಗಳಿಗೆ ಸೇರಿದ ದುಡಿಮೆಯಿಂದ ವಿಮುಕ್ತಗೊಂಡ ಮಕ್ಕಳಿಗೆ, ಸಮಾಜ ಕಲ್ಯಾಣ, ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಇಲಾಖೆಗಳ ವತಿಯಿಂದ ನಡೆಯುತ್ತಿರುವ ವಿದ್ಯಾರ್ಥಿ ನಿಲಯಗಳಲ್ಲಿ ಸ್ಥಳಾವಕಾಶ ಕಲ್ಪಿಸಿಕೊಡಬೇಕೆಂದು ವಿನಂತಿಸಿಕೊಂಡಿದ್ದಾರೆ ಮತ್ತು ಸೀಟುಗಳ ಶೇ. 25 ರಷ್ಟನ್ನು ಬಾಲ ಕಾರ್ಮಿಕರಿಗೆ ಮೀಸಲಿರಿಸಿರತಕ್ಕದೆಂದೂ ಹಾಗೂ ತದನುಸಾರವಾಗಿ ಆದೇಶಗಳನ್ನು ಹೊರಡಿಸಬೇಕೆಂದು ಸಹ ಅವರು ಕೋರಿದ್ದಾರೆ.

**ಆದೇಶ ಸಂಖ್ಯೆ: ಎಸ್‌ಎಕೆಎಐ 284 ಬಿಎಂಎಸ್ 97 ಬೆಂಗಳೂರು ದಿನಾಂಕ 21.7.1999**

ಪ್ರಸ್ತಾವವನ್ನು ಪರಿಶೀಲಿಸಲಾಯಿತು ಸಮಾಜ ಕಲ್ಯಾಣ, ಪರಿಶಿಷ್ಟ ಜಾತಿ, ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಇಲಾಖೆಗಳ ವತಿಯಿಂದ ನಡೆಯುತ್ತಿರುವ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು ಅನುದಾನಿತ ಹಾಗೂ ಅನುದಾನ ರಹಿತ ವಿದ್ಯಾರ್ಥಿನಿಲಯಗಳ ಆಯ್ಕೆ ಸಮಿತಿಗಳು, ದುಡಿಮೆಯಿಂದ ವಿಮುಕ್ತಗೊಳಿಸಲಾದ ಬಾಲ ಕಾರ್ಮಿಕರಿಗೆ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶಾವಕಾಶಕ್ಕೆ ಅಧ್ಯತೆ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ
ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಸಹಿ:-
**(ಎಂ.ಎನ್. ವಿಜೇಂದ್ರ ರಾವ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ

ಅನುಬಂಧ - ಎಲ್

ಸಾರ್ವಜನಿಕ ಶಿಕ್ಷಣ ಆಯುಕ್ತರ ಕಚೇರಿ, ಬೆಂಗಳೂರು - 1

ಸಂಖ್ಯೆ.ಎ4: ಕೆಎಪಿಆರ್ಎ ಎಸ್ಐ 115-96-97 ದಿನಾಂಕ: 24.5.1999

ರಾಜ್ಯದ ಎಲ್ಲಾ ಉಪ ನಿರ್ದೇಶಕರು,

ವಿಷಯ: ಶಾಲೆಗಳಲ್ಲಿ ಬಾಲಕಾರ್ಮಿಕರ ದಾಖಲಾತಿ

ಉಲ್ಲೇಖ: ಬಾಲ ಕಾರ್ಮಿಕರಿಗೆ ಶಾಲೆಗಳಲ್ಲಿ ಪ್ರವೇಶಾವಕಾಶ ಕಲ್ಪಿಸುವುದಕ್ಕೆ ಸಂಬಂಧಿಸಿದಂತೆ ಸರ್ಕಾರದ ಮಟ್ಟದಲ್ಲಿ ದಿನಾಂಕ: 11-5-99ರಂದು ನಡೆದ ಪ್ರಗತಿ ಪರಿಶೀಲನಾ ಸಭೆಯ ನಡವಳಿಗಳು.

- - -

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಹಾಗೂ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳಿಗನುಸಾರ ಅಪಾಯಕಾರಿ ಹಾಗೂ ಅಪಾಯಕಾರಿಯಲ್ಲದ ಕೈಗಾರಿಕೆಗಳಲ್ಲಿ ಕೆಲಸ ಮಾಡುತ್ತಿರುವ ಮಕ್ಕಳಿಗೆ ಶಾಲೆಗಳಲ್ಲಿ ಪ್ರವೇಶಾವಕಾಶ ಕಲ್ಪಿಸುವುದಕ್ಕೆ ಸಂಬಂಧಪಟ್ಟಂತೆ, ಸರ್ಕಾರದ ಮಟ್ಟದಲ್ಲಿ ದಿನಾಂಕ 11-5-99ರಂದು ಪ್ರಗತಿ ಪರಿಶೀಲನಾ ಸಭೆಯನ್ನು ನಡೆಸಲಾಯಿತು. ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಈಗಾಗಲೇ ಒದಗಿಸಲಾಗಿರುವ ಮಕ್ಕಳ ಪಟ್ಟಿಯ ಪ್ರಕಾರ, 1999-2000 ಸಾಲಿನ ಶೈಕ್ಷಣಿಕ ವರ್ಷದಲ್ಲಿ ಶಾಲೆಗಳಲ್ಲಿ ಮಕ್ಕಳಿಗೆ ಪ್ರವೇಶ ನೀಡುವಂತೆ ಸರ್ಕಾರ ಸೂಚಿಸಿದೆ. ಅಲ್ಲದೆ, ಈ ನಿರ್ದೇಶನವನ್ನು ಪಾಲಿಸದಿದ್ದರೆ ನ್ಯಾಯಾಲಯದ ನಿಂದನೆಯಾಗುತ್ತದೆಂದು ಸಹ ತಿಳಿಸಲಾಗಿದೆ. ರಾಜ್ಯದಲ್ಲಿ ಅಪಾಯಕಾರಿ ಮತ್ತು ಅಪಾಯಕಾರಿಯಲ್ಲದ ಉದ್ಯಮದಲ್ಲಿ ಕ್ರಮವಾಗಿ 1661 ಮಕ್ಕಳ ಮತ್ತು 40730 ಮಕ್ಕಳು ಇರುವರೆಂದು ಗುರುತಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ಮುಂದಿನ ಕ್ರಮಗಳನ್ನು ಕೂಡಲೇ ಕೈಗೊಳ್ಳುವಂತೆ ಮತ್ತು ಆ ಬಗ್ಗೆ ಈ ಕಚೇರಿಗೆ ತಿಳಿಸುವಂತೆ ನಿಮ್ಮನ್ನು ಕೋರಲಾಗಿದೆ:

1. ನಿಮ್ಮ ಜಿಲ್ಲೆಯ ಜಿಲ್ಲಾಧಿಕಾರಿಗಳಿಂದ, ಅಪಾಯಕಾರಿ ಅಥವಾ ಅಪಾಯಕಾರಿಯಲ್ಲದ ಉದ್ಯಮಗಳಲ್ಲಿ ಗುರುತಿಸಲಾದ ಮಕ್ಕಳ ಪಟ್ಟಿಯನ್ನು ಸಂಗ್ರಹಿಸುವಂತೆ ನಿಮ್ಮನ್ನು ಕೋರಲಾಗಿದೆ. ಸದರಿ ಪಟ್ಟಿಯಿಂದ ಶಾಲೆಗಳಿಗೆ ದಾಖಲಾಗಿರದ ಮಕ್ಕಳ ಪಟ್ಟಿಯನ್ನು ನೀವು ತಯಾರಿಸಬೇಕು ಮತ್ತು ಹಾಗೆ ಪಟ್ಟಿ ಮಾಡಲಾದ ಮಕ್ಕಳನ್ನು ಈ ಶೈಕ್ಷಣಿಕ ವರ್ಷದಲ್ಲಿ ಶಾಲೆಗಳಿಗೆ ದಾಖಲಾಗುವಂತೆ ಮಾಡತಕ್ಕದ್ದು.

2. ಈ ಪತ್ರವನ್ನು ಸ್ವೀಕರಿಸಿದ ಕೂಡಲೇ ಕ್ರಮವನ್ನು ಕೈಕೊಳ್ಳತಕ್ಕದ್ದು. ಮೇಲ್ಕಂಡ ಸದರಿ ಯತ್ನದಲ್ಲಿ ಬಿಟ್ಟುಬಿಡಲಾದ ಮಕ್ಕಳನ್ನು 99ರ ಜುಲೈ ಅವಧಿಯಲ್ಲಿ ಕೈಗೊಳ್ಳುವ ದಾಖಲಾತಿ ಕಾರ್ಯಾಚರಣೆಯಲ್ಲಿ ದಾಖಲು ಮಾಡತಕ್ಕದ್ದು ಮತ್ತು ನ್ಯಾಯಾಲಯಕ್ಕೆ ವರದಿ ಸಲ್ಲಿಸಲು ಅನುಕೂಲವಾಗುವಂತೆ ಶೇ. 100ರಷ್ಟು ದಾಖಲಾತಿ ಆಗಲು ನೋಡಿಕೊಳ್ಳತಕ್ಕದ್ದು.

3. ಕಡ್ಡಾಯ ಶಿಕ್ಷಣ ಅಧಿನಿಯಮ 1983ರ 3ನೇ ಅಧ್ಯಾಯದ ನಿಯಮ 14 ಮತ್ತು 17ರಡಿ ಅಗತ್ಯಪಡಿಸಿರುವಂತೆ ತಮ್ಮ ಮಕ್ಕಳನ್ನು ಶಾಲೆಗಳಿಗೆ ಕಳುಹಿಸಲು ವಿಫಲರಾಗುವ ಪಾಲಕರಲ್ಲಿ ಜಾಗೃತಿ ಮಾಡಲು ತಿಳುವಳಿಕೆ ನೀಡತಕ್ಕದ್ದು.

4. ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ವಿಫಲರಾಗುವ ಪಾಲಕರಿಗೆ ನೀಡುವ ತಿಳುವಳಿಕೆ ನೋಟೀಸಿನ ನಮೂನೆಯನ್ನು ಲಗತ್ತಿಸಲಾಗಿದೆ. ಈ ನೋಟೀಸುಗಳನ್ನು ನೀಡುವಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಯವರಿಗೆ ಯುಕ್ತ ಸೂಚನೆಗಳನ್ನು ನೀಡತಕ್ಕದ್ದು.

5. ಅಪಾಯಕಾರಿ ಹಾಗೂ ಅಪಾಯಕಾರಿಯಲ್ಲದ ಉದ್ಯಮಗಳಿಂದ ವಿಮುಕ್ತರಾದ ಮಕ್ಕಳ ದಾಖಲಾತಿಯನ್ನು ತೋರಿಸುವ ಪ್ರಗತಿ ವರದಿಯನ್ನು, ಸರ್ಕಾರಕ್ಕೆ ಕಳುಹಿಸಿಕೊಡುವುದಕ್ಕಾಗಿ, ಈ ಕಚೇರಿಗೆ ನಿಯತವಾಗಿ ಸಲ್ಲಿಸತಕ್ಕದ್ದು.

ಕ್ರಮ ಕೈಗೊಂಡ ಬಗ್ಗೆ ವರದಿಯನ್ನು ಕೂಡಲೇ ಸಲ್ಲಿಸತಕ್ಕದ್ದು.

ತಮ್ಮ ವಿಶ್ವಾಸಿ,

ಸಹಿ
ನಿರ್ದೇಶಕರು,
(ಪ್ರಾಥಮಿಕ ಶಿಕ್ಷಣ)

ಅನುಬಂಧ - ಎಂ

ಕರ್ನಾಟ ಸರ್ಕಾರ

ಪೋಲೀಸ್ ಇಲಾಖೆ

ಸಂ. ಎಸ್ ಎಂಎಸ್ (1) 15: 96-97

ಪೋಲೀಸ್ ಡೈರೆಕ್ಟರ್ ಜನರಲ್ ಮತ್ತು
ಇನ್‌ಸ್ಪೆಕ್ಟರ್ ಜನರಲ್ ಅವರ ಕಚೇರಿ,
ಕರ್ನಾಟಕ ಸರ್ಕಾರ
ಬೆಂಗಳೂರು ದಿನಾಂಕ: 17: 27-6-2000

ಸುತ್ತೋಲೆ

ವಿಷಯ: ಕಾರ್ಮಿಕ ಇಲಾಖೆಯ ಅಧಿಕಾರಿಗಳಿಗೆ, ಸ್ವಯಂಸೇವಾ ಸಂಸ್ಥೆಗಳ ಸಿಬ್ಬಂದಿ ಮತ್ತು ಕಾರ್ಯಕರ್ತರಿಗೆ ಅಗತ್ಯ ಪೋಲೀಸ್ ಭದ್ರತೆ ಒದಗಿಸುವ ಬಗ್ಗೆ ಸೂಚನೆ ನೀಡುವ ಕುರಿತು.

- - -

ಬಾಲ ಕಾರ್ಮಿಕರನ್ನು ಪತ್ತೆಹಚ್ಚುವುದಕ್ಕಾಗಿ ದಾಳಿ ಮಾಡುವ ಸಮಯದಲ್ಲಿ, ಮತ್ತು ಪುನರ್ವಸತಿ ಕೇಂದ್ರಗಳಲ್ಲಿ ಸಹ, ಪರಿವೀಕ್ಷಕರುಗಳಂತಹ ಕಾರ್ಮಿಕ ಇಲಾಖೆಯ ಅಧಿಕಾರಿಗಳು, ಸ್ವಯಂಸೇವಾ ಸಂಸ್ಥೆಗಳ ಸಿಬ್ಬಂದಿ ಮತ್ತು ಕಾರ್ಯಕರ್ತರ ಮೇಲೆ, ಬಾಲಕಾರ್ಮಿಕರ ನಿಯೋಜಕರು ಹಲ್ಲೆ ನಡೆಸಿರುವಂತಹ ಪ್ರಕರಣಗಳನ್ನು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ (ಎನ್‌ಹೆಚ್‌ಆರ್‌ಸಿ) ಅಧಿಕಾರಿಗಳು ನಮ್ಮ ಗಮನಕ್ಕೆ ತಂದಿದ್ದಾರೆ.

2. ಬಾಲ ಕಾರ್ಮಿಕರನ್ನು ಪತ್ತೆಹಚ್ಚುವುದಕ್ಕಾಗಿ ಕಾರ್ಮಿಕ ಇಲಾಖೆಯ ಅಧಿಕಾರಿಗಳು ದಾಳಿ ಮಾಡಿದಾಗಲೆಲ್ಲ ಮತ್ತು ಅವರು ಪುನರ್ವಸತಿ ಕೇಂದ್ರಗಳಿಗೆ ಭೇಟಿ ನೀಡುವ ಸಮಯದಲ್ಲಿ ಅವರಿಗೆ ಹಾಗೂ ಅವರೊಂದಿಗಿರುವಂತಹ ಸ್ವಯಂಸೇವಾ ಸಂಸ್ಥೆಗಳ ಸಿಬ್ಬಂದಿ ಮತ್ತು ಕಾರ್ಯಕರ್ತರುಗಳಿಗೆ, ಅಗತ್ಯ ಪೋಲೀಸ್ ರಕ್ಷಣೆಯನ್ನು ಒದಗಿಸಲು, ಪೋಲೀಸ್ ಠಾಣೆಗಳ ಪ್ರಭಾರದಲ್ಲಿರುವಂತಹ ಎಲ್ಲಾ ಅಧಿಕಾರಿಗಳಿಗೆ, ಮತ್ತು ಅವರ ಅಧಿಕಾರ ವ್ಯಾಪ್ತಿಯಲ್ಲಿ ಬರುವಂತಹ ಮೇಲ್ವಿಚಾರಣಾ ಅಧಿಕಾರಿಗಳಿಗೆ ಸೂಚಿಸುವಂತೆ ಘಟಕಾಧಿಕಾರಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ. ಈ ಸಂಬಂಧದಲ್ಲಿ, ಕಾರ್ಮಿಕ ಇಲಾಖೆಯ ಅಧಿಕೃತ ಅಧಿಕಾರಿಗಳಿಂದ ರಕ್ಷಣೆ ಕೋರಿ ಮನವಿ ಬಂದಾಗಲೆಲ್ಲಾ ಪೋಲೀಸ್ ರಕ್ಷಣೆಯನ್ನು ನೀಡತಕ್ಕದ್ದು.

3. ಈ ಉದ್ದೇಶಕ್ಕಾಗಿ, ಕಾರ್ಮಿಕ ಇಲಾಖೆಯ ಅಧಿಕಾರಿಗಳು ಸ್ವಯಂ ಸೇವಾ ಸಂಸ್ಥೆಗಳ ಕಾರ್ಯಕರ್ತರು, ಪೋಲೀಸ್ ಠಾಣೆಗಳಿಗೆ ಭೇಟಿ ನೀಡಿದಾಗಲೆಲ್ಲಾ, ಅವರ ಜೊತೆ ಯುಕ್ತ ಸೌಜನ್ಯದಿಂದ ವರ್ತಿಸತಕ್ಕದ್ದು ಮತ್ತು ಬಾಲಕಾರ್ಮಿಕ ಪ್ರಕರಣಗಳನ್ನು ಪತ್ತೆಹಚ್ಚುವುದಕ್ಕೆ ಮತ್ತು ಬಾಲಕಾರ್ಮಿಕರಿಗೆ ಪುನರ್ವಸತಿ ಕಲ್ಪಿಸುವುದಕ್ಕೆ ಸಂಬಂಧಿಸಿದಂತೆ ಅವರ ಕರ್ತವ್ಯಗಳ ನಿರ್ವಹಣೆಯಲ್ಲಿ ಅವರಿಗೆ ಎಲ್ಲಾ ರೀತಿಯ ನ್ಯಾಯ ಸಮ್ಮತವಾದ ನೆರವನ್ನು ನೀಡತಕ್ಕದ್ದು.

4. ಕಾರ್ಮಿಕ ಇಲಾಖೆಯ ಅಧಿಕಾರಗಳು ಮತ್ತು ಸ್ವಯಂಸೇವಾ ಸಂಸ್ಥೆಗಳ ಕಾರ್ಯಕರ್ತರ ವಿರುದ್ಧ ಬಾಲಕಾರ್ಮಿಕರ ನಿಯೋಜಕರು ಮಾಡಿರುವ ಹಲ್ಲೆಯ ಘಟನೆಗಳನ್ನು ಗಂಭೀರವಾಗಿ ಪರಿಗಣಿಸತಕ್ಕದ್ದು ಮತ್ತು ಆ ಕುರಿತು ಪರಿಣಾಮಕಾರಿಯಾಗಿ ವ್ಯವಹರಿಸತಕ್ಕದ್ದು.

ಸಹಿ
ಪೋಲೀಸ್ ಡೈರೆಕ್ಟರ್ ಜನರಲ್ ಮತ್ತು
ಇನ್‌ಸ್ಪೆಕ್ಟರ್ ಜನರಲ್

ಗೆ:

1. ಪೋಲೀಸ್ ಆಯುಕ್ತರುಗಳು, ಬೆಂಗಳೂರು ನಗರ, ಮೈಸೂರು ನಗರ ಮತ್ತು ಹುಬ್ಬಳ್ಳಿ ಧಾರವಾಡ ನಗರ,
2. ಎಲ್ಲಾ ವಲಯಗಳ ಪೋಲೀಸ್ ಇನ್‌ಸ್ಪೆಕ್ಟರ್ ಜನರಲ್‌ಗಳು
3. ತಮ್ಮ ನಿಯಂತ್ರಣದಲ್ಲಿ ಬರುವಂತಹ ಪೋಲೀಸ್ ಠಾಣೆಗಳಿಗೆ ತಿಳಿಸುವುದಕ್ಕಾಗಿ ಕೆಜಿಎಫ್ ಮತ್ತು ರೈಲ್ವೆ ಸೇರಿದಂತೆ, ಎಲ್ಲಾ ಜಿಲ್ಲೆಗಳ ಪೋಲೀಸ್ ಸೂಪರಿಂಟೆಂಡೆಂಟುಗಳಿಗೆ

ಸಹಿ
ಪೋಲೀಸ್ ಡೈರೆಕ್ಟರ್, ಜನರಲ್
ಮತ್ತು ಇನ್ ಸ್ಪೆಕ್ಟರ್ ಜನರಲ್ ಅವರ ಪರವಾಗಿ

ಅನುಬಂಧ - ಎನ್

<u>ಕರ್ನಾಟಕ ಸರ್ಕಾರ</u>

ಸಂ. ಐಐಎಫ್‌ಡಬ್ಲ್ಯೂ 24 ಎಸ್‌ಎಂಎಂ 97

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 08.01.2001.

<u>ಸುತ್ತೋಲೆ</u>

ವಿಷಯ: ಬಾಲಕಾರ್ಮಿಕರಿಗೆ ಸಂಬಂಧಿಸಿದಂತೆ ಸಮುಚಿತ ವೈದ್ಯಕೀಯ ಪ್ರಾಧಿಕಾರಿಯು ವಯಸ್ಸಿನ ದೃಢೀಕರಣ ಪ್ರಮಾಣಪತ್ರ ನೀಡುವ ಕುರಿತು.

- - -

ಕರ್ನಾಟಕ ಬಾಲಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮ 1986 ಮತ್ತು ಅದರಡಿಯ ನಿಯಮಗಳ ಅನುಷ್ಠಾನದಲ್ಲಿ ಜಾರಿ ಸಿಬ್ಬಂದಿಯು ಪತ್ತೆಹಚ್ಚಲಾದ ಬಾಲಕಾರ್ಮಿಕರಿಗೆ ಸಂಬಂಧಿಸಿದಂತೆ ಸಮುಚಿತ ವೈದ್ಯಕೀಯ ಪ್ರಾಧಿಕಾರಿಯಿಂದ ವಯಸ್ಸಿನ ದೃಢೀಕರಣ ಪ್ರಮಾಣಪತ್ರವನ್ನು ಪಡೆಯುವಲ್ಲಿ ಸರ್ಕಾರವು, ಕಾಲಕಾಲಕ್ಕೆ ತೊಂದರೆಯನ್ನು ಎದುರಿಸುತ್ತದೆ.

ಬಾಲ ಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) (ಕರ್ನಾಟಕ) ನಿಯಮಗಳು, 1998ರ 4ನೇ ನಿಯಮದ ವಿವರಣೆಯಲ್ಲಿ, ಈ ರೀತಿ ನಿಗದಿಪಡಿಸಲಾಗಿದೆ.

ಈ ನಿಯಮದ ಉದ್ದೇಶಕ್ಕಾಗಿ, "ವೈದ್ಯಕೀಯ ಪ್ರಾಧಿಕಾರಿ" ಎಂದರೆ ಜಿಲ್ಲಾ ಆಸ್ಪತ್ರೆಯ ಸಹಾಯಕ ಸರ್ಜನ್‌ನ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಸರ್ಕಾರಿ ವೈದ್ಯಾಧಿಕಾರಿ ಅಥವಾ ಯಾವುದೇ ಇತರ ಸರ್ಕಾರಿ ಆಸ್ಪತ್ರೆ ಅಥವಾ ನೌಕರರ ರಾಜ್ಯ ವಿಮಾ ಆಸ್ಪತ್ರೆಗಳು ಅಥವಾ ಔಷಧಾಲಯಗಳಲ್ಲಿ ನಿಯೋಜಿತರಾಗಿರುವಂತಹ ತತ್ಸಮಾನ ದರ್ಜೆಯ ವೈದ್ಯಾಧಿಕಾರಿ ಎಂದರ್ಥ.

ಮೇಲ್ಕಂಡ ನಿಯಮಗಳ 4ನೇ ನಿಯಮದ ವಿವರಣೆಯ ಪ್ರಕಾರ, ವೈದ್ಯಕೀಯ ಪ್ರಾಧಿಕಾರಿ ಎಂದು ನಿಗದಿಪಡಿಸಲಾದಂಥ ಸರ್ಕಾರಿ ಆಸ್ಪತ್ರೆಗಳ ವೈದ್ಯಾಧಿಕಾರಿಗಳು ವಯಸ್ಸಿನ ದೃಢೀಕರಣ ಪ್ರಮಾಣಪತ್ರವನ್ನು ನೀಡುವುದು ಅಗತ್ಯಪಡಿಸಿದಾಗಲೆಲ್ಲಾ ಅವರು ಹಾಗೆ ನೀಡಬೇಕು.

ಈ ವಿಷಯಕ್ಕೆ ಸಂಬಂಧಿಸಿದಂತೆ, ವೈದ್ಯಕೀಯ ಪ್ರಾಧಿಕಾರಿಯನ್ನಾಗಿ ನಿಗದಿಪಡಿಸಲಾದಂತಹ ಸರ್ಕಾರಿ ವೈದ್ಯಾಧಿಕಾರಿಗಳಿಗೆ ಸುತ್ತೋಲೆ ಸಂಖ್ಯೆ ಡಿಐಐಎಸ್: ಪಿಎಸ್: ಸಿಇಆರ್: 37/2000-01 ದಿನಾಂಕ: 27-6-2000ನ್ನು ರದ್ದುಪಡಿಸಿ ಈ ಮುಂದಿನ ಆಡಳಿತಾತ್ಮಕ ಮಾರ್ಗದರ್ಶಿ ಸೂತ್ರಗಳನ್ನು ನೀಡಲಾಗಿದೆ.

1. ಎಲ್ಲಾ ಸರ್ಕಾರಿ ವೈದ್ಯಾಧಿಕಾರಿಗಳು, ಕಾರ್ಮಿಕ ಇಲಾಖೆಯ ಅನುಷ್ಠಾನ ಸಿಬ್ಬಂದಿ ಮತ್ತು ಅಧಿಕಾರಿಗಳೊಂದಿಗೆ ಸಹಕರಿಸಬೇಕು ಮತ್ತು ವಯಸ್ಸಿನ ದೃಢೀಕರಣ ಪ್ರಮಾಣಪತ್ರಗಳನ್ನು ನೀಡುವಂತೆ ನಿರ್ದಿಷ್ಟ ಮನವಿಗಳನ್ನು ನಿಯಮಗಳ ಪ್ರಕಾರ ಅಂತಹ ಮಾಡಿದಾಗಲೆಲ್ಲಾ: ಪ್ರಮಾಣಪತ್ರಗಳನ್ನು ನೀಡಬೇಕು.

2. ಅನುಷ್ಠಾನ ಸಿಬ್ಬಂದಿಯು, 14 ವರ್ಷ ಅದಕ್ಕಿಂತ ಕಡಿಮೆ ವಯಸ್ಸಿನ ದುಡಿಯುವ ಮಕ್ಕಳನ್ನು ಪತ್ತೆಹಚ್ಚುವಲ್ಲಿ ಮತ್ತು ಗುರುತಿಸುವಲ್ಲಿ ಸರ್ಕಾರಿ ವೈದ್ಯಾಧಿಕಾರಿಗಳ ಸಹಾಯವನ್ನು ಕೋರಿದಾಗಲೆಲ್ಲಾ ಅವರು ಆ ಜಾರಿ ಸಿಬ್ಬಂದಿಯೊಂದಿಗೆ ಹೋಗಬೇಕು.

ಸಹಿ
( ಬಿ.ಎನ್. ನರಸಿಂಹಮೂರ್ತಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಗೆ:

1) ಸಂಕಲನಕಾರರು, ಕರ್ನಾಟ ಗೆಜೆಟ್, ಸರ್ಕಾರಿ ಮುದ್ರಣಾಲಯ, ಬೆಂಗಳೂರು, ಗಜೆಟ್‌ನ ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುವ ಕೋರಿಕೆಯೊಂದಿಗೆ.

ಪ್ರತಿಗಳು:

2) ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು.

3) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು.

4) ಆಯುಕ್ತರು, ಕಾರ್ಮಿಕ ಇಲಾಖೆ, ಬೆಂಗಳೂರು.

5) ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು

6) ಇಲಾಖೆಯ ಎಲ್ಲಾ ವಿಭಾಗೀಯ ಜಂಟಿ ನಿರ್ದೇಶಕರು

7) ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು

8) ಜಿಲ್ಲಾ ಆಸ್ಪತೆಗಳ ಎಲ್ಲಾ ಜಿಲ್ಲಾ ಸರ್ಜನ್‌ಗಳು

9) ಶಾಖೆಯ ರಕ್ಷಣಾ ಕಡತ: ಬಿಡಿ ಪ್ರತಿಗಳು.

ಅನುಬಂಧ - ಒ

<u>ಕರ್ನಾಟಕ ಸರ್ಕಾರ</u>

ಸಂ. ಡಿಪಿಎಆರ್ 3 ಎಸ್‌ಆರ್‌ಪಿ 97

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ
ಬೆಂಗಳೂರು, ದಿನಾಂಕ: 11.11.1997.

<u>ಅಧಿಸೂಚನೆ</u>

ಕರ್ನಾಟಕ ಸಿವಿಲ್ ಸೇವಾ (ವರ್ತನೆ) ನಿಯಮಗಳು, 1966ನ್ನು ಮತ್ತಷ್ಟು ತಿದ್ದುಪಡಿ ಮಾಡುವ ಸಲುವಾಗಿ ಈ ಮುಂದಿನ ನಿಯಮಗಳ ಕರಡನ್ನು, ಅಧಿಕೃತ ರಾಜ್ಯಪತ್ರದಲ್ಲಿ ಅವುಗಳ ಪ್ರಕಟಣೆಯ ದಿನಾಂಕದಿಂದ 30 ದಿನಗಳೊಳಗಾಗಿ ಅವುಗಳಿಂದ ತೊಂದರೆಗೊಳಗಾಗುವ ಸಾಧ್ಯತೆ ಇರುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳು: ಸಲಹೆಗಳನ್ನು ಕೋರಿ, ದಿನಾಂಕ: 25-9-1997ರ ಕರ್ನಾಟಕ ರಾಜ್ಯಪತ್ರ ಭಾಗ - iv , ಪ್ರಕರಣ 2(ಸಿ) ರಲ್ಲಿನ ಅಧಿಸೂಚನೆ ಸಂಖ್ಯೆ ಡಿಪಿಎಆರ್ ಎಸ್‌ಆರ್‌ಸಿ 3 ಎಸ್‌ಆರ್‌ಸಿ 97 ದಿನಾಂಕ: 21-7-1997 ರಲ್ಲಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 24) 23ನೇ ಉಪಪ್ರಕರಣದ ಮೂಲಕ ಅತ್ಯಪಡಿಸಲಾದಂತೆ ಪ್ರಕಟಿಸಲಾಗಿದೆ.

ಮತ್ತು ಸದರಿ ರಾಜ್ಯಪತ್ರವು ದಿನಾಂಕ: 25-9-1997ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದೆ.

ಮತ್ತು ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ಸಲಹೆಗಳು ಅಥವಾ ಆಕ್ಷೇಪಣೆಗಳು ಬಂದಿಲ್ಲ.

ಆದ್ದರಿಂದ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 8ನೇ ಪ್ರಕರಣದೊಂದಿಗೆ ಬದಲಾದ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಪ್ರಸ್ತುತ ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸಿದೆ:

<u>ನಿಯಮಗಳು</u>

1. <u>**ಶೀರ್ಷಿಕೆ ಮತ್ತು ಪ್ರಾರಂಭ:**</u> (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ತನೆ) (----- ತಿದ್ದುಪಡಿ) ನಿಯಮಗಳು, 1997 ಎಂದು ಕರೆಯತಕ್ಕದ್ದು.

   2. ಈ ನಿಯಮಗಳು ಅಧಿಕೃತ ರಾಜಪತ್ರದಲ್ಲಿ ಅವುಗಳ ಪ್ರಕಟಣೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. <u>**ಹೊಸ ನಿಯಮ 29ಎ ನ ಸೇರ್ಪಡೆ:-**</u> ಕರ್ನಾಟಕ ಸಿವಿಲ್ ಸೇವಾ (ವರ್ತನೆ) ನಿಯಮಗಳು, 1966ರ 29ನೇ ನಿಯಮದ ನಂತರ, ಈ ಮುಂದಿನ ನಿಯಮವನ್ನು ಸೇರಿಸತಕ್ಕದ್ದು ಎಂದರೆ:-

" 29ಎ, ಮಕ್ಕಳ ನಿಯೋಜನೆ:- (1) ಯಾರೇ ಸರ್ಕಾರಿ ನೌಕರನು, ಹದಿನಾಲ್ಕು ವರ್ಷ ವಯಸ್ಸಿನ ಯಾವುದೇ ಮಗುವನ್ನು ಗೃಹಕೃತ್ಯದ ಸಹಾಯಕ್ಕಾಗಿ ಕೆಲಸಕ್ಕೆ ನಿಯೋಜಿಸಿಕೊಳ್ಳತಕ್ಕದ್ದಲ್ಲ; ಯಾರೇ ಸರ್ಕಾರಿ ನೌಕರನಿಂಗಾಗುವ (1)ನೇ ಉಪನಿಯಮ ಉಲ್ಲಂಘನೆಯು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 8ನೇ ನಿಯಮದ v ರಿಂದ vii ರವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಲಾದ ಯಾವುದೇ ದಂಡನೆಗೆ ಗುರಿಯಾಗತಕ್ಕ ದುರ್ನಡತೆಯಾಗುತ್ತದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

ಸಹಿ
**(ಕೆ.ಎಲ್. ಜಯರಾಂ)**
ಸರ್ಕಾರದ ಅಧೀನ ಕಾರ್ಯದರ್ಶಿ - II
ಸಿಆಸುಇ (ಸೇ ನಿ)

ಅನುಬಂಧ - ಕ್ಯೂ

ಬಳಕೆ ಪ್ರಮಾಣಪತ್ರದ ನಮೂನೆ

(ರಾಜ್ಯ ನಿಧಿಗಳನ್ನು ಬಳಸಿಕೊಳ್ಳುವಂತಹ ಎನ್‌ಸಿಎಲ್‌ಪಿ ಯೇತರ ಜಿಲ್ಲೆಗಳಿಗಾಗಿ)

(ಕರ್ನಾಟಕ ಹಣಕಾಸು ಸಂಹಿತೆಗನುಸಾರವಾಗಿ)

| ಕ್ರಮ ಸಂಖ್ಯೆ | ಪತ್ರ ಸಂಖ್ಯೆ ಮತ್ತು ದಿನಾಂಕ | ಮೊಬಲಗು | |
|---|---|---|---|
| | | | ಮಾರ್ಜಿನ್‌ನಲ್ಲಿ ಕೊಡಲಾಗಿರುವ ಈ ಮಂತ್ರಾಲಯ: ಇಲಾಖೆಯ ಪತ್ರ ಸಂಖ್ಯೆ .................ರ ಅಡಿಯಲ್ಲಿ...........ರ ಹೆಸರಿನಲ್ಲಿ..........ವರ್ಷದ ಅವಧಿಯಲ್ಲಿ ಮಂಜೂರಾದ.................ರೂ.ಗಳ ಸಹಾಯಾನುದಾನ ಮತ್ತು ಹಿಂದಿನ ವರ್ಷದ ಖರ್ಚು ಮಾಡದೆ ಉಳಿದ ..............ರೂ.ಗಳ ಮೊಬಲಗು ಸೇರಿದಂತೆ ಒಟ್ಟು ................ ರೂ.ಗಳ ಮೊತ್ತವನ್ನು, ಅದನ್ನು ಮಂಜೂರು ಮಾಡಲಾಗಿರುವಂತಹ ................ಉದ್ದೇಶಕ್ಕಾಗಿ ಬಳಸಿಕೊಳ್ಳಲಾಗಿದೆ ಎಂದು ಮತ್ತು ವರ್ಷದ ಮುಕ್ತಾಯದಲ್ಲಿ ಬಳಸಿಕೊಳ್ಳದೆ ಉಳಿದಿರುವಂತಹ...........ರೂ.ಗಳ ಶಿಲ್ಕನ್ನು ಸರ್ಕಾರಕ್ಕೆ ಅಧ್ಯರ್ಪಿಸಲಾಗಿದ್ದು (ಪತ್ರ ಸಂಖ್ಯೆ..............ದಿನಾಂಕ...............ನೋಡಿ) ಅದನ್ನು ಮುಂದಿನ ........................ವರ್ಷದ ಅವಧಿಯಲ್ಲಿ ಸಂದಾಯವಾಗಬೇಕಾದ ಸಹಾಯಮಾನುದಾನಗಳಿಗೆ ಹೊಂದಾಣಿಕೆ ಮಾಡಲಾಗುವುದೆಂದು ಪ್ರಮಾಣೀಕರಿಸಲಾಗಿದೆ. |

3. ಮಂಜೂರು ಮಾಡಲಾಗಿರುವಂತಹ ಸಹಾಯನುದಾಮಗಳ ಬಗೆಗಿನ ಷರತ್ತುಗಳನ್ನು ಯುಕ್ತವಾಗಿ ಪಾಲಿಸಿರುವುದು: ಪಾಲಿಸುತ್ತಿರುವುದು ನನಗೆ ಸಮಾಧಾನ ನೀಡಿದೆ ಎಂದು ಮತ್ತು ಹಣವನ್ನು ವಾಸ್ತವವಾಗಿ ಯಾವು ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿತ್ತೋ ಆ ಉದ್ದೇಶಕ್ಕಾಗಿಯೇ ಬಳಸಿಕೊಳ್ಳಲಾಗಿದೆ ಎಂಬುದನ್ನು ಕಂಡುಕೊಳ್ಳುವುದಕ್ಕಾಗಿ ನಾನು ಈ ಮುಂದಿನ ತಪಾಸಣೆಗಳನ್ನು ನಡೆಸಿದ್ದೇನೆಂದು ಪ್ರಮಾಣೀಕರಿಸುತ್ತೇನೆ.

ನಡೆಸಲಾದ ತಪಾಸಣೆಯ ವಿಧಗಳು

ಸಹಿ:

ಪದನಾಮ:

ದಿನಾಂಕ:

ಅನುಬಂಧ - ಕ್ಯೂ1

## ಬಳಕೆ ಪ್ರಮಾಣದ ನಮೂನೆ
(ರಾಜ್ಯ ನಿಧಿಗಳನ್ನು ಬಳಸಿಕೊಳ್ಳುವಂತಹ ಎನ್‌ಸಿಎಲ್‌ಪಿ ಜಿಲ್ಲೆಗಳಿಗಾಗಿ)

(ಕರ್ನಾಟಕ ಹಣಕಾಸು ಸಂಹಿತೆಗನುಸಾರವಾಗಿ)

| ಕ್ರಮ ಸಂಖ್ಯೆ | ಪತ್ರ ಸಂಖ್ಯೆ ಮತ್ತು ದಿನಾಂಕ | ಮೊಬಲಗು | ಮಾರ್ಜಿನ್‌ನಲ್ಲಿ ಕೊಡಲಾಗಿರುವಂತಹ ಈ ಮಂತ್ರಾಲಯ: ಇಲಾಖೆಯ ಪತ್ರ ಸಂಖ್ಯೆ...........ರ ಅಡಿಯಲ್ಲಿ ............ರ ಹೆಸರಿನಲ್ಲಿ .................. ವರ್ಷದ ಅವಧಿಯಲ್ಲಿ ಮಂಜೂರಾದ ............. ರೂ.ಗಳ ಸಹಾಯಮಾನುದಾನ ಮತ್ತುಹಿಂದಿನ ವರ್ಷದಲ್ಲಿ ಖರ್ಚುಮಾಡದೆ ಉಳಿದ ................ ರೂ.ಗಳ ಮೊತ್ತವನ್ನು ಅದನ್ನು ಮಂಜೂರು ಮಾಡಲಾಗಿರುವಂತಹ ........... ಉದ್ದೇಶಕ್ಕಾಗಿ ಬಳಸಿಕೊಳ್ಳಲಾಗಿದೆ ಎಂದು ಮತ್ತು ವರ್ಷದ ಮುಕ್ತಾಯದಲ್ಲಿ ಬಳಸಿಕೊಳ್ಳದೆ ಉಳಿದಿರುವಂತಹ............... ರೂ. ಗಳ ಶಿಲ್ಕನ್ನು ಸರ್ಕಾರಕ್ಕೆ ಅಧ್ಯರ್ಪಿಸಲಾಗಿದ್ದು (ಪತ್ರ ಸಂಖ್ಯೆ...........ದಿನಾಂಕ........... ನೋಡಿ) ಅದನ್ನು ಮುಂದಿನ .................... ವರ್ಷದ ಅವಧಿಯಲ್ಲಿ ಸಂದಾಯವಾಗಬೇಕಾದ ಸಹಾಯನುದಾನಗಳಿಗೆ ಹೊಂದಾಣಿಕೆ ಮಾಡಲಾಗುವುದೆಂದು ಪ್ರಮಾಣೀಕರಿಸಲಾಗಿದೆ. |
|---|---|---|---|

4. ಮಂಜೂರು ಮಾಡಲಾಗಿರುವಂತಹ ಸಹಾಯಾನುದಾನಗಳ ಬಗೆಗಿನ ಷರತ್ತುಗಳನ್ನು ಯುಕ್ತವಾಗಿ ಪಾಲಿಸಿರುವುದು: ಪಾಲಿಸುತ್ತಿರುವುದು ನನಗೆ ಸಮಾಧಾನ ನೀಡಿದೆ ಎಂದು ಮತ್ತು ಹಣವನ್ನು ವಾಸ್ತವವಾಗಿ ಯಾವ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿತ್ತೋ ಆ ಉದ್ದೇಶಕ್ಕಾಗಿಯೇ ಬಳಸಿಕೊಳ್ಳಲಾಗಿದೆ ಎಂಬುದನ್ನು ಕುಡುಕೊಳ್ಳುವದ್ದಕ್ಕಾಗಿ ನಾನು ಈ ಮುಂದಿನ ತಪಾಸಣೆಗಳನ್ನು ನಡೆಸಿದ್ದೇನೆಂದು ಪ್ರಮಾಣೀಕರಿಸುತ್ತೇನೆ.

ನಡೆಸಲಾದ ತಪಾಸಣೆಯ ವಿಧಗಳು

1.

2.

ಸಹಿ:
ಪದನಾಮ:
ದಿನಾಂಕ:

ಅನುಬಂಧ - ಆರ್

## ಆದಾಯ ಮತ್ತು ವೆಚ್ಚದ ವಿವರಪಟ್ಟಿ

................ಕ್ಕೆ ಮುಕ್ತಾಯವಾಗುವ ವರ್ಷದ ಆದಾಯ ಮತ್ತು ವೆಚ್ಚದ ಲೆಕ್ಕ

| ವೆಚ್ಚ | ಆದಾಯ |
|---|---|
| **1. ಯೋಜನಾ ಸಂಘದ ವೆಚ್ಚ:**<br>(ಎ) ಯೋಜನಾ ಸಂಘದ ಸಿಬ್ಬಂದಿಗೆ ಗೌರವ ಸಂಭಾವನೆ<br>(ಬಿ) ಕಚೇರಿ ಖರ್ಚುಗಳು<br>(ಸಿ) ಪ್ರಯಾಣ ವೆಚ್ಚಗಳು<br>(ಡಿ) ತರಬೇತಿ<br>(ಇ) ಪ್ರಚಾರ: ಜಾಗೃತಿ ಮೂಡಿಸುವುದು<br>(ಎಫ್) ವಿಚಾರ ಸಂಕಿರಣಗಳು, ಕಾರ್ಯಾಗಾರಗಳು ಇತ್ಯಾದಿ<br>(ಜಿ) ಸಮೀಕ್ಷೆ ಏನಾದರೂ ಇದ್ದರೆ, ಅಂಥ ಸಮೀಕ್ಷೆ<br>(ಹೆಚ್) ಇತರೆ ಬಾಬುಗಳು ಏನಾದರೂ ಇದ್ದರೆ, ಅವುಗಳು | 1. ಸಂಘದಿಂದ ಸ್ವೀಕರಿಸಿದಂತಹ ಅನುದಾನಗಳು<br>2. ಗಳಿಸಲಾದ ಬಡ್ಡಿ<br>3. ಇತರೆ ಬಾಬುಗಳು, ಏನಾದರೂ ಇದ್ದರೆ ಅವುಗಳು. |
| **2. ವಿಶೇಷ ವಸತಿ ಶಾಲೆಗಳು:**<br>(ಎ) ಸಿಬ್ಬಂದಿಗೆ ಗೌರವ ಸಂಭಾವನೆ<br>(ಬಿ) ಆಹಾರ ವೆಚ್ಚಗಳು<br>(ಸಿ) ನೀರಿನ ವೆಚ್ಚಗಳು<br>(ಡಿ) ವಿದ್ಯುಚ್ಛಕ್ತಿ ವೆಚ್ಚಗಳು<br>(ಇ) ಬಾಡಿಗೆ<br>(ಎಫ್) ಶೈಕ್ಷಣಿಕ ಸಾಮಗ್ರಿ<br>(ಜಿ) ವೃತ್ತಿಪರ ಸಾಮಗ್ರಿ<br>(ಹೆಚ್) ಸಾದಿಲ್ವಾರು<br>ಆದಾಯದಲ್ಲಿ ವೆಚ್ಚವನ್ನು ಕಳೆಯಲಾಗಿ ಉಳಿದ ಆದಾಯದ ಮೊತ್ತ: | |

ಜಿಲ್ಲಾ ಯೋಜನಾ ಸಂಘವು ಈ ಮುಂದಿನ ಲೆಕ್ಕಪುಸ್ತಕಗಳನ್ನು ನಿರ್ವಹಿಸತಕ್ಕದ್ದು ಮತ್ತು ಸಂಘದ ಲೆಕ್ಕಪತ್ರಗಳನ್ನು ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು:

(ಎ) ನಗದು ಪುಸ್ತಕ

(ಬಿ) ಬ್ಯಾಂಕ್ ಪಾಸ್ ಬುಕ್

(ಸಿ) ಸಾಮಾನ್ಯ ಲೆಡ್ಜರ್

(ಡಿ) ಲೆಕ್ಕಪರಿಶೋಧನೆಯ ದಾಖಲೆಗಳು

ಯೋಜನಾ ನಿರ್ದೇಶಕರ ಸಹಿ

ಅನುಬಂಧ - ಎಸ್

..................ರ ಜೂನ್: ಡಿಸೆಂಬರ್ ಅಂತ್ಯವಾಗುವ ಅವಧಿಯ ಅರ್ಧವಾರ್ಷಿಕ ಪ್ರಗತಿ ವರದಿ

(ಡಿಪಿಎಸ್, ಕಾರ್ಮಿಕ ಆಯುಕ್ತರಿಗೆ ಸಲ್ಲಿಸಬೇಕಾಗಿರುವುದು ಪ್ರತಿಯೊಂದು ಆರ್ಥಿಕ ವರ್ಷಕ್ಕೆ ಅಂಕಿಅಂಶಗಳನ್ನು ವರದಿ ಮಾಡತಕ್ಕದ್ದು.)

1. ವಿಶೇಷ ವಸತಿ ಶಾಲೆಗಳು:

(ಎ) ಕಾರ್ಯನಿರ್ವಹಿಸುತ್ತಿರುವ ವಿಶೇಷ ವಸತಿ ಶಾಲೆಗಳ ಸಂಖ್ಯೆ:

(ಬಿ) ಯಾವ ವೃತ್ತಿ ಕೈಗಾರಿಕೆಗಳಿಂದ ಮಕ್ಕಳನ್ನು ಮುಕ್ತಗೊಳಿಸಲಾಗಿದೆಯೋ ಆ ವೃತ್ತಿ, ಕೈಗಾರಿಕೆಗಳ ಹೆಸರು:-

| | ಪುರುಷರು | | | ಮಹಿಳೆಯರು | | | ಒಟ್ಟು |
|---|---|---|---|---|---|---|---|
| | ಪ.ಜಾ | ಪ.ಪಂ | ಇತರರು | ಪ.ಜಾ | ಪ.ಪಂ | ಇತರರು | |
| 1. ವರ್ಷದ ಪ್ರಾರಂಭದಲ್ಲಿ ಶಾಲೆಯ ಹಾಜರಿ ಪುಸ್ತಕದಲ್ಲಿ ದಾಖಲಿಸಿರುವ ಮಕ್ಕಳ ಸಂಖ್ಯೆ | | | | | | | |
| 2. ಪ್ರಸ್ತುತ ಅರ್ಧವಾರ್ಷಿಕ ಅವಧಿಯಲ್ಲಿ ಶಾಲೆಗೆ ಸೇರಿಸಲಾದ ಮಕ್ಕಳ ಸಂಖ್ಯೆ | | | | | | | |
| 3. ಪ್ರಸ್ತುತ ಅರ್ಧವಾರ್ಷಿಕ ಅವಧಿಯಲ್ಲಿ ಶಾಲೆ ಬಿಟ್ಟ ಮಕ್ಕಳ ಸಂಖ್ಯೆ | | | | | | | |
| 4. ಪ್ರಸ್ತುತ ಅರ್ಧವಾರ್ಷಿಕ ಅವಧಿಯಲ್ಲಿ ಶಿಕ್ಷಣದ ಮುಖ್ಯವಾಹಿನಿಗೆ ಸೇರಿದ ಮಕ್ಕಳ ಸಂಖ್ಯೆ | | | | | | | |
| 5. ಪ್ರಸ್ತುತ ವರ್ಷದಲ್ಲಿ 14 ವರ್ಷ ವಯಸ್ಸು ಪೂರ್ಣಗೊಂಡ ನಂತರ ಶಾಲೆಯಿಂದ ಹೊರಗೆ ಹೋದ ಮಕ್ಕಳ ಸಂಖ್ಯೆ | | | | | | | |
| 6. ಪ್ರಸ್ತುತ ಅರ್ಧವಾರ್ಷಿಕ ಅವಧಿಯ ಅಂತ್ಯದಲ್ಲಿ ಶಾಲೆಯ ಹಾಜರಿ ಪಟ್ಟಿಯಲ್ಲಿದ್ದ ಮಕ್ಕಳ ಸಂಖ್ಯೆ (1 + 2) - (3 + 4 + 5) - 6 | | | | | | | |

| | | | | | | | |
|---|---|---|---|---|---|---|---|
| 7. ವೃತ್ತಿ: ಕುಶಲ ತರಬೇತಿ. ತರಬೇತಿ ಪಡೆಯುತ್ತಿರುವ ಮಕ್ಕಳ ಸಂಖ್ಯೆ. | | | | | | | |

8. ತರಬೇತಿ ನೀಡಲಾಗುತ್ತಿರುವ ವೃತ್ತಿ:

9. ದಿನದ ........................ ಗಂಟೆಗಳಲ್ಲಿ ವಿಶೇಷ ಶಾಲಾ ಶಿಕ್ಷಣದ ಅವಧಿ:

## II. ಆರೋಗ್ಯ ರಕ್ಷಣೆ:

ಎ) ವರ್ಷದಲ್ಲಿ ಆರೋಗ್ಯ ತಪಾಸಣೆಗೆ ಒಳಪಟ್ಟ ಮಕ್ಕಳ ಸಂಖ್ಯೆ.

ಬಿ) ಪತ್ತೆ ಹಚ್ಚಲಾದ ಸಾಮಾನ್ಯ ಖಾಯಿಲೆಗಳು.

## III. ಆಹಾರ ಮತ್ತು ಪೌಷ್ಠಿಕತೆ:

ಎ) ಆಹಾರ ಪದಾರ್ಥಗಳನ್ನು ಪ್ರಮಾಣಾನುಸಾರವಾಗಿ ನೀಡಲಾಗುತ್ತಿದೆಯೇ ಅಥವಾ ಇಲ್ಲವೆ

ಬಿ) ಆಹಾರ ಮತ್ತೆ ಪೌಷ್ಠಿಕ ಪದಾರ್ಥಗಳನ್ನು ನೀಡಿದ ದಿನಗಳ ಸಂಖ್ಯೆ;

ಸಿ) ಆಹಾರ: ಪೌಷ್ಠಿಕಾಂಶಗಳ ಮಾದರಿ.

## IV. ಯಾವುದೇ ಇತರ ಮಾಹಿತಿ:

ಯೋಜನಾ ನಿರ್ದೇಶಕರ/ ಕಾರ್ಯದರ್ಶಿ

ಅನುಷ್ಠಾನ ಏಜೆನ್ಸಿಯ ಸಹಿ ಮತ್ತು ಮೊಹರು

ಅನುಬಂಧ - ಎಸ್1

## ಮಾರ್ಚಿಗೆ ಅಂತ್ಯವಾಗುವ ಅವಧಿಯ ವಾರ್ಷಿಕ ಪ್ರಗತಿ ವರದಿ

(ಪ್ರತಿಯೊಂದು ಆರ್ಥಿಕ ವರ್ಷಕ್ಕೆ ಡಿಪಿಎಸ್‌ನಿಂದ ಜಿಲ್ಲಾ ಸಂಘದ ಮೂಲಕ ಕಾರ್ಮಿಕ ಆಯುಕ್ತರಿಗೆ ಸಲ್ಲಿಸಬೇಕಾದುದು)

**ವಿಶೇಷ ವಸತಿ ಶಾಲೆಗಳು:**

(ಸಿ) ಕಾರ್ಯನಿರ್ವಹಿಸುತ್ತಿರುವ ವಿಶೇಷ ವಸತಿ ಶಾಲೆಗಳ ಸಂಖ್ಯೆ:

(ಡಿ) ಯಾವ ವೃತ್ತಿ: ಕೈಗಾರಿಕೆಗಳಿಂದ ಮಕ್ಕಳನ್ನು ಮುಕ್ತಗೊಳಿಸಲಾಗಿದೆಯೋ ಆ ವೃತ್ತಿ ಕೈಗಾರಿಕೆಗಳ ಹೆಸರು:

| | ಪುರುಷರು | | | ಮಹಿಳೆಯರು | | | ಒಟ್ಟು |
|---|---|---|---|---|---|---|---|
| | ಪ.ಜಾ | ಪ.ಪಂ. | ಇತರರು | ಪ.ಜಾ | ಪ.ಪಂ | ಇತರರು | |
| 1 ವರ್ಷದ ಪ್ರಾರಂಭದಲ್ಲಿ ಶಾಲೆಯ ಹಾಜರಿ ಪಟ್ಟಿಯಲ್ಲಿ ದಾಖಲಾದ ಮಕ್ಕಳ ಸಂಖ್ಯೆ. | | | | | | | |
| 2. ವರ್ಷದಲ್ಲಿ ಶಾಲೆಗೆ ಸೇರಿದ ಮಕ್ಕಳ ಸಂಖ್ಯೆ | | | | | | | |
| 3. ಶಾಲೆ ಬಿಟ್ಟ ಮಕ್ಕಳ ಸಂಖ್ಯೆ | | | | | | | |
| 4. ಮುಖ್ಯವಾಹಿನಿ ಶಿಕ್ಷಣಕ್ಕೆ ಸೇರಿದ ಮಕ್ಕಳ ಸಂಖ್ಯೆ. | | | | | | | |
| 5. 14 ವರ್ಷ ವಯಸ್ಸು ಪೂರ್ಣಗೊಂಡ ನಂತರ ಶಾಲೆಯಿಂದ ಹೊರಗೆ ಹೋದ ಮಕ್ಕಳ ಸಂಖ್ಯೆ. | | | | | | | |
| 6. ವರ್ಷಾಂತ್ಯದಲ್ಲಿ ಶಾಲೆಯ ಹಾಜರಿ ಪಟ್ಟಿಯಲ್ಲಿರುವ ಮಕ್ಕಳ ಸಂಖ್ಯೆ. (1 + 2) - (3 + 4 + 5) - 6 | | | | | | | |
| 7. ವೃತ್ತಿ: ಕುಶಲ ತರಬೇತಿ. ತರಬೇತಿ ಪಡೆಯುತ್ತಿರುವ ಮಕ್ಕಳ ಸಂಖ್ಯೆ. | | | | | | | |

8. ತರಬೇತಿ ನೀಡಲಾಗುತ್ತಿರುವ ವೃತ್ತಿ:

9. ಯೋಜನೆಯ ಅಡಿಯಲ್ಲಿ ಕೆಲ ಸ ಮಾಡುತ್ತಿರುವ ಅನುಷ್ಠಾನ ಏಜೆನ್ಸಿಗಳ: ಸರ್ಕಾರೇತರ ಸಂಸ್ಥೆಗಳ : ಸ್ವಯಂ ಸೇವಾ ಸಂಸ್ಥೆಗಳ ಸಂಖ್ಯೆ:

10. ಬಾಲಕಾರ್ಮಿಕರ ಬಗ್ಗೆ ನಡೆದ ಶಿಬಿರಗಳ ಸಂಖ್ಯೆ:

11. ಯೋಜನೆಯ ಅಡಿಯಲ್ಲಿ ಕೆಲಸ ಮಾಡುತ್ತಿರುವ ಕಾರ್ಯನಿರತ ಸ್ವಯಂ ಸೇವಕರ ಸಂಖ್ಯೆ:

12. (ಎ) ಬೋಧಕ ಸ್ವಯಂಸೇವಾಕರ ತರಬೇತಿಗಾಗಿ ನಡೆದ ತರಬೇತಿ ಶಿಬಿರಗಳ ಸಂಖ್ಯೆ:

(ಬಿ) ಪಾಲ್ಗೊಂಡಿದ ಶಿಕ್ಷಕರ ಸಂಖ್ಯೆ:

13. ದಿನದ ............ ಗಂಟೆಗಳಲ್ಲಿ ವಿಶೇಷ ಶಾಲಾ ಶಿಕ್ಷಣದ ಅವಧಿಗೆ ಸ್ವೀಕರಿಸಲಾದ ಹಣ.

14. ಹಣಕಾಸಿನ ಸ್ಥಿತಿ

(ಎ) ವರ್ಷದ ಪ್ರಾರಂಭದಲ್ಲಿನ ಶಿಲ್ಕು:

(ಬಿ) ವರ್ಷಾವಧಿಯಲ್ಲಿ ಸ್ವೀಕರಿಸಿದ ಹಣ:

(ಸಿ) ಒಟ್ಟು

(ಡಿ) ವೆಚ್ಚ

(ಇ) ವರ್ಷಾಂತ್ಯದಲ್ಲಿನ ಶಿಲ್ಕು.

**II. <u>ಆರೋಗ್ಯ ರಕ್ಷಣೆ:</u>**

(ಎ) ವರ್ಷದಲ್ಲಿ ಆರೋಗ್ಯ ತಪಾಸಣೆಗೆ ಒಳಗಾದ ಮಕ್ಕಳ ಸಂಖ್ಯೆ.

(ಬಿ) ಪತ್ತೆಹಚ್ಚಲಾದ ಸಾಮಾನ್ಯ ಖಾಯಿಲೆಗಳು

**III. <u>ಆಹಾರ ಮತ್ತು ಪೌಷ್ಠಿಕಾಂಶಗಳು:</u>**

(ಡಿ) ಆಹಾರ ಪದಾರ್ಥಗಳನ್ನು ಪ್ರಮಾಣಾನುಸಾರವಾಗಿ ಮಾಡಲಾಗುತ್ತಿದೆಯೇ ಅಥವಾ ಇಲ್ಲವೇ.

(ಇ) ಆಹಾರ ಮತ್ತು ಪೌಷ್ಠಿಕಾಂಶಗಳನ್ನು ನೀಡಲಾದ ದಿನಗಳ ಸಂಖ್ಯೆ.

(ಎಫ್) ಆಹಾರ: ಪೌಷ್ಠಿಕಾಂಶದ ಮಾದರಿ

**IV. <u>ಯಾವುದೇ ಇತರ ಮಾಹಿತಿ:</u>**

ಯೋಜನಾ ನಿರ್ದೇಶಕರ : ಕಾರ್ಯದರ್ಶಿ, ಅನುಷ್ಠಾನ ಏಜೆನ್ಸಿಯ ಸಹಿ ಮತ್ತು ಮೊಹರು.

ಅನುಬಂಧ - ಟಿ

................ಗೆ ಅಂತ್ಯವಾಗುವ ತ್ರೈಮಾಸಿಕ ಅವಧಿಗೆ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳ ಅನುಷ್ಠಾನದ ಮೇಲಿನ ತ್ರೈಮಾಸಿಕ ಸ್ಥಿತಿ ಕುರಿತ ವರದಿ

(ಜಿಲ್ಲಾಧಿಕಾರಿಗಳು, ಕಾರ್ಮಿಕ ಆಯುಕ್ತರಿಗೆ ಸಲ್ಲಿಸಬೇಕಾಗಿರುವುದು, ಯೋಜನೆಯ ಪ್ರಾರಂಭದಿಂದ ಅಂಕಿಅಂಶಗಳನ್ನು ವರದಿ ಕೊಡುವುದು)

ಜಿಲ್ಲೆಯ ಹೆಸರು .........

| ಕ್ರ. ಸಂ. | ಬಾಬು |
|---|---|
| 1. | ಗುರುತಿಸಲಾದ ಬಾಲ ಕಾರ್ಮಿಕ ಒಟ್ಟು ಸಂಖ್ಯೆ<br>ಎ) ಅಪಾಯಕಾರಿ ಕಾರ್ಯಾಚರಣೆಗಳಲ್ಲಿ<br>ಬಿ) ಅಪಾಯಕಾರಿಯಲ್ಲದ ಕಾರ್ಯಾಚರಣೆಗಳಲ್ಲಿ<br>ಸಿ) ಒಟ್ಟು: |
| 2. | ಶಾಲೆಗಳಲ್ಲಿ ದಾಖಲಾದ ಬಾಲ ಕಾರ್ಮಿಕರ ಸಂಖ್ಯೆ:<br>ಎ) ವಿಶೇಷ ವಸತಿ ಶಾಲೆಗಳು<br>ಬಿ) ಮುಖ್ಯ ವಾಹಿನಿ ಶಾಲೆಗಳು<br>ಸಿ) ಅನೌಪಚಾರಿಕ ಶಾಲೆಗಳು (ಸರ್ಕಾರ, ಸರ್ಕಾರೇತರ ಸಂಸ್ಥೆಗಳಿಂದ ನಡೆಸುತ್ತಿರುವ) |
| 3. | ಈ ಮುಂದಿನಂತೆ ಉದ್ಯೋಗ ನೀಡಿರುವ ವಿಮುಕ್ತ ಬಾಲ ಕಾರ್ಮಿಕರ ಕುಟುಂಬದ ವಯಸ್ಕ ಸದಸ್ಯರ ಸಂಖ್ಯೆ.<br>ಎ) ಬಡತನ ನಿವಾರಣಾ ಕಾರ್ಯಕ್ರಮದ ಅಡಿಯಲ್ಲಿ ಮಜೂರಿ ಉದ್ಯೋಗ.<br>ಬಿ) ಬಡತನ ನಿವಾರಣ ಕಾರ್ಯಕ್ರಮದ ಅಡಿಯಲ್ಲಿ ಸ್ವಂತ ಉದ್ಯೋಗ.<br>ಸಿ) ಸರ್ಕಾರ ಅಥವಾ ಇತರೆಡೆಗಳಲ್ಲಿ ನಿಯತ ಉದ್ಯೋಗ.<br>ಡಿ) ಒಟ್ಟು |
| 4. | ಎ) ನಡೆಸಲಾದ ಪರಿವೀಕ್ಷಣೆಗಳ ಸಂಖ್ಯೆ<br>ಬಿ) ಹೂಡಲಾದ ಪ್ರಾಸಿಕ್ಯೂಷನ್‌ಗಳ ಸಂಖ್ಯೆ.<br>ಸಿ) ಖುಲಾಸೆಗಳ ಸಂಖ್ಯೆ |
| 5. | ಎ) ವಸೂಲು ಮಾಡಲಾದ ಪರಿಹಾರ ಧನದ ಮೊಬಲಗು.<br>ಪ್ರತಿ ಮಗುವಿಗೆ 20,00 ರೂಪಾಯಿಯಂತೆ. |

| | |
|---|---|
| | ಬಿ) ಪ್ರಕರಣಗಳ ಸಂಖ್ಯೆ<br>ಸಿ) ನಿಯೋಜಕರಿಂದ ವಸೂಲು ಮಾಡಲಾದ ಮೊಬಲಗು.<br>ಡಿ) ಸರ್ಕಾರದಿಂದ ಬಿಡುಗಡೆ ಮಾಡಲಾದ ಮೊಬಲಗು. (ಪ್ರತಿ ಮಗುವಿಗೆ 5,000 - ರಾಪಾಯಿಯಂತೆ)<br>ಇ) ಸರ್ಕಾರದ ಮಂಜೂರಾತಿ ಆದೇಶ ಸಂಖ್ಯೆ ಮತ್ತು ದಿನಾಂಕ |
| 6. | ಲಭ್ಯವಿರುವ ಮೂಲ ನಿಧಿಯ ಒಟ್ಟು ಮೊಬಲಗು ಪ್ರಾರಂಭದಿಂದ) |
| 7. | ಆ ನಿಧಿಯನ್ನು ಠೇವಣಿ ಇಟ್ಟಿರುವ ಬ್ಯಾಂಕ್: ಬ್ಯಾಂಕುಗಳ ಹೆಸರು ಮತ್ತು ಖಾತೆ ಸಂಖ್ಯೆ |
| 8. | ಪ್ರಾಪ್ತವಾದ ಬಡ್ಡಿಯ ಒಟ್ಟು ಮೊಬಲಗು (ಪ್ರಾರಂಭದಿಂದ) |
| 9. | ಗಳಿಸಲಾದ ಬಡ್ಡಿಯಿಂದ ಖರ್ಚು ಮಾಡಲಾದ ಒಟ್ಟು ಮೊಬಲಗು ಪ್ರಾರಂಭದಿಂದ) |

ಜಿಲ್ಲಾಧಿಕಾರಿಯ ಸಹಿ.

ಅನುಬಂಧ - ಯು

## ಎನ್‌ಸಿಎಲ್‌ಪಿ ಯೇತರ ಜಿಲ್ಲೆಗಳ ಯೋಜನಾ ಸಂಘದ ಆಯವ್ಯಯ

(ರಾಜ್ಯ ಕ್ರಿಯಾ ಯೋಜನೆಯ ಅಡಿಯಲ್ಲಿ ಪ್ರತಿ ಜಿಲ್ಲಾ ಸಂಘಕ್ಕೆ ಪ್ರತಿವರ್ಷಕ್ಕೆ)

| ಕ್ರ. ಸಂ. | ವೆಚ್ಚದ ಬಾಬು (ಗೌರವ ಧನ) | ಆಯವ್ಯಯ |
|---|---|---|
| 1. | ಯೋಜನಾ ನಿರ್ದೇಶಕರು (1X12 X5000) | 60,000 |
| 2. | ಕ್ಷೇತ್ರಾಧಿಕಾರಿ (1 X 12 X 3000) | 36,000 |
| 3. | ಶೀಘ್ರಲಿಪಿಗಾರ ಹಾಗೂ ಲೆಕ್ಕಿಗ (1 X 2000 X 12) | 24,000 |
| 4. | ಸಹಾಯಕ : ಜವಾನ (1 X 12 X 1500) | 18,000 |
| | ಒಟ್ಟು: | 1,38,000 |

### ಭಾಗ - ಬಿ

### ಎನ್‌ಸಿಎಲ್‌ಪಿಯೇತರ ಜಿಲ್ಲೆಗಳಿಗೆ ಕಚೇರಿ ಮತ್ತು ಬೆಂಬಲ ವೆಚ್ಚಗಳು

| ಕ್ರ. ಸಂ | ವೆಚ್ಚದ ಬಾಬು | ಆಯವ್ಯಯ |
|---|---|---|
| 1. | ಆವರ್ತಕ ಕಚೇರಿ ವೆಚ್ಚ | 50,000 |
| 2. | ಅಮೊರಾವರ್ತಕ ಪೀಠೋಪಕರಣಗಳು | 50,000 |
| | ಒಟ್ಟು: | 1,00,000 |
| | ಒಟ್ಟು : ಎ + ಬಿ | 2,38,000 |

ಅನುಬಂಧ - ವಿ

<u>ಸಮೀಕ್ಷೆ ತರಬೇತಿಗಾಗಿ ಆಯವ್ಯಯ ಪ್ರಮಾಣ</u>

**ಸಮೀಕ್ಷೆ ಮೇಲ್ವಿಚಾರಣಾ ಸಿಬ್ಬಂದಿ ತರಬೇತಿ:**

| | |
|---|---|
| 1. ನೋಡಲ್ ಅಧಿಕಾರಿಗಳಿಗೆ: ಮೇಲ್ವಿಚಾರಕರಿಗೆ ನೀಡಲಾಗುವ ಒಂದು ದಿನದ ತರಬೇತಿ (ಪ್ರತಿಯೊಂದು ತಾಲ್ಲೂಕಿಗೆ 30 ಸದಸ್ಯರಿಗೆ ತರಬೇತಿ ನೀಡಬಹುದು) | ಊಟ ಮತ್ತು ತರಬೇತಿ ಸಾಮಗ್ರಿಗಳಿಗಾಗಿ ಪ್ರತಿ ವ್ಯಕ್ತಿಗೆ 70 - ರಾಪಾಯಿ ಉಪಯೋಗಿಸಬಹುದು. |
| 2 ಸಮೀಕ್ಷೆ ನಮೂನೆಗಳ ಮುದ್ರಣ ವೆಚ್ಚ | ಪ್ರತಿ ನಮೂನೆಗೆ 50 ಪೈಸೆ |
| 3. **ಕ್ಷೇತ್ರ ಸಮೀಕ್ಷ ವೆಚ್ಚ:** (ಎ) ಅಗತ್ಯವಿರುವ ಒಟ್ಟು ಸಮೀಕ್ಷಕರು ಗ್ರಾಮೀಣ - (ಪ್ರತಿಯೊಂದು ಗ್ರಾಮಕ್ಕೆ ಒಂದು ಅಥವಾ ಜಿಲ್ಲಾಧಿಕಾರಿ ಯುಕ್ತವೆಂದು ಭಾವಿಸುವಷ್ಟು.) | |
| ನಗರ - (ಪ್ರತಿಯೊಂದು ವಾರ್ಡ್‌ಗೆ ಒಂದು ಅಥವಾ ಜಿಲ್ಲಾಧಿಕಾರಿ ಯುಕ್ತವೆಂದು ಭಾವಿಸುವಷ್ಟು.) | ಪ್ರತಿ ವ್ಯಕ್ತಿಗೆ 40-00 ರೂಪಾಯಿ |
| (ಬಿ) ವೆಚ್ಚ ಗ್ರಾಮೀಣ: ನಗರ | ಪ್ರತಿ ವ್ಯಕ್ತಿಗೆ 50-00 ರೂಪಾಯಿ. |
| 3. ಜಿಲ್ಲಾ ಮಟ್ಟದಲ್ಲಿ ಸಮೀಕ್ಷೆ ವರದಿಗಳ ಕ್ರೋಡೀಕರಣ ವೆಚ್ಚ | ಕೆಲಸದ ಒತ್ತಡವನ್ನು ಅವಲಂಬಿಸಿ ಪ್ರತಿ ಜಿಲ್ಲೆಗ 25,000 ರೂಪಾಯಿ ಅಥವಾ ಅದಕ್ಕೂ ಕಡಿಮೆ |

ಟಿಪ್ಪಣಿ: ಮೂರು ವರ್ಷಗಳ ನಂತರ ಮಧ್ಯಂತರ ಸಮೀಕ್ಷೆ ನಡೆಸತಕ್ಕದ್ದು. ಮಧ್ಯಂತರ ಸಮೀಕ್ಷೆಗೆ ಪ್ರತ್ಯೇಕ ಹಣ ಬಿಡುಗಡೆ ಮಾಡಲಾಗುವುದು.

**ಒಂದು ವರ್ಷದಲ್ಲಿ ಸ್ವಯಂಸೇವಕರು: ಬೋಧನಾ ಸಿಬ್ಬಂದಿ: ಅಧಿಕಾರಿಗಳ ತರಬೇತಿಗೆ: ವಿಚಾರ ಸಂಕಿರಣ: ಶಿಬಿರಗಳಿಗೆ ಅಯವ್ಯಯ ಪ್ರಮಾಣ**

| | |
|---|---|
| ಬೋಧನಾ ಸಿಬ್ಬಂದಿ ತರಬೇತಿ:<br>(ಎ) ಎನ್ ಸಿಎಲ್ ಪಿಯನ್ನೊಳಗೊಂಡು ಎಲ್ಲಾ ವಿಶೇಷ ಶಾಲೆಗಳು ಇದರ ವ್ಯಾಪ್ತಿಗೆ ಬರುತ್ತವೆ.<br>(ಬಿ) ಪ್ರತಿ ಶಾಲೆಗೆ ಶಿಕ್ಷಕರ ಒಟ್ಟು ಸಂಖ್ಯೆ - 3<br>(ಸಿ) ಒಂದು ವರ್ಷದಲ್ಲಿ 10 ದಿನಗಳ ತರಬೇತಿ (ಒಂದು ವರ್ಷದಲ್ಲಿ ಎರಡು ಸಂದರ್ಭಗಳಲ್ಲಿ ನಡೆಸಬಹುದಾಗಿದ್ದು ಪ್ರತಿಯೊಂದು ಸಲದ ಅವಧಿ ಐದು ದಿವಸಗಳು)<br>(ಡಿ) ಪ್ರತಿ ವ್ಯಕ್ತಿಗೆ, ಪ್ರತಿ ದಿನಕ್ಕೆ ಒಟ್ಟು ವೆಚ್ಚ. (ಆಹಾರ + ಸಾಮಗ್ರಿ)<br>ಟಿಪ್ಪಣಿ: ಪ್ರವಾಸಭತ್ಯೆ ಮತ್ತು ದಿನಭತ್ಯೆ ಸಂದಾಯ ಮಾಡುವುದಿಲ್ಲ. | ಅಂದಾಜು ವೆಚ್ಚ<br><br>ರೂ. 100/- |
| 2. ಬಾಲಕಾರ್ಮಿಕ ಪದ್ಧತಿ (ನಿಷೇಧ ಮತ್ತು ನಿಯಂತ್ರಣ) ಅಧಿನಿಯಮ, 1986ರ 17ನೇ ಪ್ರಕರಣದ ಮೇರೆಗೆ ಪರಿವೀಕ್ಷಕರಿಗೆ ತರಬೇತಿ.<br>(ಎ) ಪರಿವೀಕ್ಷಕರ ಒಟ್ಟು ಸಂಖ್ಯೆ 2051<br>(ಬಿ) ತರಬೇತಿ ನೀಡಲಾಗುವ ದಿನಗಳ ಒಟ್ಟು ಸಂಖ್ಯೆ - 3 ದಿನಗಳು.<br>(ಸಿ) ಪ್ರತಿ ವ್ಯಕ್ತಿಗೆ ಸಾಮಗ್ರಿ ವೆಚ್ಚ<br>ಟಿಪ್ಪಣಿ: ಪರಿವೀಕ್ಷಕರು ಅವರಿಗೆ ಸಂಬಂಧಪಟ್ಟ ಇಲಾಖೆಗಳಿಂದ ಪ್ರವಾಸ ಭತ್ಯೆ: ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. | ರೂ.30/- |
| 3. ಕ್ರಿಯಾ: ಯೋಜನೆಯ ಅನುಷ್ಠಾನದಲ್ಲಿ ನಿರತರಾಗಿರುವ ಅಧಿಕಾರಿಗಳಿಗೆ: ಸರ್ಕಾರೇತರ ಸಂಸ್ಥೆಗಳಿಗೆ ತರಬೇತಿ: | |

| | |
|---|---|
| (ಎ) ಪ್ರತಿಯೊಂದು ತಾಲ್ಲೂಕಿನಲ್ಲಿ ಎರಡು ತರಬೇತಿಗಳನ್ನು ನೆಡಸಲಾಗುವುದು ಮತ್ತು ಪ್ರತಿಯೊಂದು ತರಬೇತಿ ತಂಡವು 30 ವ್ಯಕ್ತಿಗಳನ್ನು ಒಳಗೊಂಡಿರುತ್ತದೆ.<br>(ಬಿ) ಪ್ರತಿಯೊಂದು ತರಬೇತಿ ತಂಡದಲ್ಲಿ 30 ಜನರಿರುವುದು.<br>(ಸಿ) ಪ್ರತಿ ಜಿಲ್ಲೆಗೆ ಎರಡು ತರಬೇತಿಗಳು, ಪ್ರಸಾಮಾಗ್ರಿ ವೆಚ್ಚ ( 30 X 30 X 404)<br><br>ಟಿಪ್ಪಣಿ:ಅವರುಗಳು ಪ್ರಯಾಣ ಭತ್ಯೆ: ದಿನಭತ್ಯೆಗಳನ್ನು ಅವರಿಗೆ ಸಂಬಂಧಿಸಿದ ಇಲಾಖೆ: ಸಂಸ್ಥೆಗಳಿಂಗ ಪಡೆಯತಕ್ಕದ್ದು. | ಪ್ರತಿ ತರಬೇತಿ ಶಿಬಿರಕ್ಕೆ ಪ್ರತಿ ವ್ಯಕ್ತಿಗೆ ರೂ. 30 - |
| 4. ನಡೆಸಲಾಗುವ ಶಿಬಿರಗಳು ಮತ್ತು ವಿಚಾರ ಸಂಕಿರಣಗಳು:<br>ಎ) ಪ್ರತಿ ವರ್ಷ ಪ್ರತಿಯೊಂದು ಜಿಲ್ಲೆಯಲ್ಲಿ ನಡೆಸಲಾಗುವ 1 ದಿನದ ಶಿಬಿರಗಳು: ವಿಚಾರ ಸಂಕಿರಣಾಗಳ ಸಂಖ್ಯೆ - 2<br>ಬಿ) ಭಾಗವಹಿಸುವವರ ಒಟ್ಟು ಸಂಖ್ಯೆ: ಪ್ರತಿಯೊಂದು ತಂಡದಲ್ಲಿ 50 ವ್ಯಕ್ತಿಗಳು.<br>ಸಿ) ಪ್ರತಿದಿನಕ್ಕೆ ಪ್ರತಿ ವ್ಯಕ್ತಿಗೆ ಆಹಾರ ಮತ್ತು ಸಾಮಗ್ರಿಗಳ ವೆಚ್ಚ<br>ಡಿ) ಪ್ರತಿ ಶಿಬಿರ: ವಿಚಾರ ಸಂಕಿರಣದ ಸಾದಿಲ್ವಾರು ವೆಚ್ಚ | ರೂ.100/<br><br>ರೂ.1,000/ |

**ರಾಜ್ಯಮಟ್ಟದ ತರಬೇತಿ ಮತ್ತು ವಿಚಾರ ಸಂಕಿರಣಗಳು: ಶಿಬಿರಗಳು ಇತ್ಯಾದಿಗಳಿಗಾಗಿ ಮತ್ತು ಅಧಿಕಾರಿಗಳು: ಸರ್ಕಾರೇತರ ಸಂಸ್ಥೆಗಳಿಗೆ ತರಬೇತಿಗಾಗಿ ಅಂದಾಜು ಬಜೆಟ್**

| | |
|---|---|
| 1. ಸಮೀಕ್ಷೆಯ ಸಂಬಂಧದಲ್ಲಿ ಒಂದು ದಿನದ ತರಬೇತಿ:<br><br>(ಎ) ಒಟ್ಟು ವ್ಯಕ್ತಿಗಳು - ಪ್ರತಿ ಜಿಲ್ಲೆಗೆ 3 ವ್ಯಕ್ತಿಗಳು (3 X 27 X 81)<br>ಬಿ) ಊಟ + ಸಾಮಗ್ರಿಗಳು + ಸಭಾಂಗಣದ ಬಾಡಿಗೆ ಇತ್ಯಾದಿಗಳ ವೆಚ್ಚ 81 X 200 | 16,200/ |

| | |
|---|---|
| 2. ಒಂದು ದಿನದ ಶಿಬಿರ: ವಿಚಾರಸಂಕಿರಣ: ತರಬೇತಿ<br><br>(ಎ) ಪ್ರಸ್ತಾವಿಸಿರುವ ಅಂತಹ ವಿಚಾರ ಸಂಕಿರಣಗಳ ಸಂಖ್ಯೆ - 3<br>ಬಿ) ಭಾಗವಹಿಸುವವರು 3 X 50 = 150<br><br>ಸಿ) ತರಬೇತಿ ಸಾಮಗ್ರಿಗಳು + ಊಟದ ವೆಚ್ಚ (150 X 200<br>ಡಿ) ಸಂಪನ್ಮೂಲ ವ್ಯಕ್ತಿಗಳಿಗೆ ಗೌರವ ಧನ ಮತ್ತು ಸಂಭಾಂಗಣ, ಮೈಕ್ ಇತ್ಯಾದಿಗಳ ಬಾಡಿಗೆ ಸೇರಿದಂತೆ ಇತರೆ ವೆಚ್ಚ | 30,000/<br><br>45,000/ |
| ಒಟ್ಟು: | 91,200/. |

ಅನುಬಂಧ - ಡಬ್ಲ್ಯೂ

## ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆಯಲ್ಲಿ ಸಂಕಲಿಸಿರುವ ಶಾಲೆಯಿಂದ ಹೊರಗಿರುವ ಮಕ್ಕಳ ಜಿಲ್ಲಾವಾರು ಅಂಕಿಅಂಶಗಳು

(ತಾತ್ಕಲಿಕ)

| ಜಿಲ್ಲೆಯ ಹೆಸರು | 614 ವಯೋಮಾನದ ಮಕ್ಕಳ ಜನಸಂಖ್ಯೆ | 61-4 ವಯೋಮಾನದ ಸಮೂಹದಲ್ಲಿ ಶಾಲೆಯಿಂದ ಹೊರಗುರಪವ ಮಕ್ಕಳು | | | | |
|---|---|---|---|---|---|---|
| | ಬಾಲಕರು | ಬಾಲಕಿಯರು | ಒಟ್ಟು | ಬಾಲಕರು | ಬಾಲಕಿಯರ ು | ಒಟ್ಟು |
| 1. ಕರ್ನಾಟಕ | 48,11853 | 46,67318 | 94,79171 | 50,6481 | 54,7263 | 10,53744 |
| 2. ರಾಯಚೂರು | 219458 | 21,7917 | 43,7375 | 53,637 | 63,255 | 11,6892 |
| 3. ಗುಲ್ಬರ್ಗ | 36,7314 | 35,4822 | 72,2136 | 88,706 | 97,291' | 18,5997 |
| 4. ಕೊಪ್ಪಳ | 13,1840 | 13,0253 | 26,2093 | 27,017 | 31,119 | 58,136 |
| 5. ಬಿಜಾಪುರ | 22,5203 | 21,3713 | 43,8916 | 40,891 | 40,442 | 81,333 |
| 6. ಬಳ್ಳಾರಿ | 20,7531 | 20,3585 | 41,1116 | 34,512 | 39,063 | 73,575 |
| 7. ಬಾಗಲಕೋಟೆ | 16,7304 | 16,4956 | 33,2260 | 22,978 | 27,285 | 50,263 |
| 8. ಬೀದರ್ | 17,6240 | 16,8406 | 34,4546 | 19,819 | 22,980 | 42,799 |
| 9. ಚಾಮರಾಜನಗರ | 71,676 | 69,880 | 14,1556 | 8548 | 8553 | 17,101 |
| 10. ಗದಗ್ | 91,957 | 89,469 | 18,1426 | 10,085 | 11,227 | 21,312 |
| 11. ಹಾವೇರಿ | 13,3844 | 12,6746 | 26,0590 | 13,339 | 13,124 | 26,463 |
| 12. ಕೊಡಗು | 42705 | 42,401 | 85,106 | 4198 | 4082 | 8280 |
| 13. ದಾವಣಗೆರೆ | 163191 | 15,6495 | 31,9686 | 14272 | 14724 | 28,996 |
| 14. ಚಿತ್ರದುರ್ಗ | 13,5992 | 13,0547 | 26,6539 | 11144 | 12349 | 23,493 |
| 15. ಬೆಳಗಾವಿ | 38,8843 | 37,4842 | 76,3685 | 30190 | 34,336 | 64,526 |
| 16. ಮೈಸೂರು | 22,7023 | 22,0210 | 44,7233 | 18,539 | 19,232 | 37,771 |
| 17. ಧಾರವಾಡ | 10,9734 | 10,4903 | 21,4637 | 8977 | 8862 | 17,839 |
| 18. ಉತ್ತರಕನ್ನಡ | 11,7167 | 11,1420 | 22,8587 | 9335 | 9523 | 18,858 |
| 19. ಕೋಲಾರ | 22,8852 | 22,4957 | 45,3809 | 15,641 | 17,977 | 33,618 |
| 20. ಚಿಕ್ಕಮಗಳೂರು | 95,780 | 93,860 | 18,9640 | 6354 | 6537 | 12,891 |
| 21. ಶಿವಮೊಗ್ಗ | 14,2380 | 13,8958 | 28,1338 | 9996 | 8822 | 18,818 |
| 22. ಹಾಸನ | 14,3777 | 14,3054 | 28,6831 | 8972 | 9155 | 18127 |
| 23. ತುಮಕೂರು | 22,2216 | 21,5545 | 43,7761 | 11,814 | 12,437 | 24,251 |
| 24. ಬೆಂಗಳೂರು (ಗ್ರಾಮೀಣ) | 16,1084 | 15,5279 | 31,6363 | 8534 | 7902 | 16,436 |
| 25. ಮಂಡ್ಯ | 14,4929 | 14,1735 | 28,6664 | 7773 | 7082 | 14,855 |
| 26. ಬೆಂಗಳೂರು (ದಕ್ಷಿಣ) | 46,2328 | 43,1347 | 89,3675 | 17,552 | 15,750 | 33,302 |
| 27. ದಕ್ಷಿಣ ಕನ್ನಡ | 14,6707 | 14,8315 | 29,5022 | 2639 | 3113 | 5752 |
| 28. ಉಡುಪಿ | 86,778 | 93,803 | 18,0581 | 1019 | 1041 | 2060 |

Printed by : The Director of Printing, Stationery and Publications, Government Press, Bangalore - 1.

**ಅನುಬಂಧ - ಎಕ್ಸ್**

ಡಾ. ಹೆಚ್.ಐ. ಲಿಂಗಮ್ಮ ಎಂ.ಡಿ

ಆ.ಸ.ಪ.ಸಂ : ಅಭಿವೃದ್ಧಿ : 234: 99-2000

ಡಾ..........................ರವರೇ.

**ಕಾರ್ಮಿಕರ ರಾಜ್ಯ ವಿಮಾ ಯೋಜನೆ (ವೈ) ಸೇವೆ, ರಾಜಾಜಿನಗರ, ಬೆಂಗಳೂರು - 10**

ವಿಷಯ: ಬಾಲ ಕಾರ್ಮಿಕ ಕಾರ್ಮಿಕರ ವಯಸ್ಸು ನಿರ್ಧರಿಸಲು ಧೃಡೀಕರಣ ಪತ್ರವನ್ನು ನೀಡುವ ಕುರಿತು.

ಉಲ್ಲೇಖ: ಸರ್ಕಾರದ ಕಾರ್ಯದರ್ಶಿಯವರು, ಕಾರ್ಮಿಕ ಇಲಾಖೆ, ಇವರ ಅರೆ ಸರ್ಕಾರಿ ಪತ್ರ ಸಂ. ಎಲ್‌ಡಿ 10, ಸಿಎಲ್‌ಸಿ 2000, ದಿನಾಂಕ 25-03-2000.

ಸರ್ಕಾರದ ಕಾರ್ಯದರ್ಶಿಯವರು,ಕಾರ್ಮಿಕ ಇಲಾಖೆ, ಇವರು ಉಲ್ಲೇಖಿತ ಇತರೆ ಸರ್ಕಾರಿ ಪತ್ರದಲ್ಲಿ ಬಾಲ ಕಾರ್ಮಿಕರ ನಿವಾರಣೆ ಬಗ್ಗೆ ಬಾಲ ಕಾರ್ಮಿಕರ ವಯಸ್ಸು ನಿರ್ಧರಿಸುವ ಕುರಿತು ಪರಿಶೋಧನಾ ಅಧಿಕಾರಿಗಳು ಕೋರಿದಾಗ ಸ್ಥಳದಲ್ಲಿಯೇ ವಯಸ್ಸು ನಿರ್ಧಾರ ಪತ್ರವನ್ನು ನೀಡಲು ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ವಿಮಾ ವೈದ್ಯಾಧಿಕಾರಿಗಳಿಗೆ ಸೂಚನೆಯನ್ನು ನೀಡಲು ಸೂಚಿಸಿರುತ್ತಾರೆ. ಹಾಗೂ ಈ ಬಗ್ಗೆ ಅವಶ್ಯಕವಿರುವ ಉಪಕರಣಗಳ ಕಿಟ ಸಹ ಸರಬರಾಜು ಮಾಡುವಂತೆ ಸಹ ಸೂಚಿಸಿರುತ್ತಾರೆ.

ಆದುದರಿಂದ ಬಾಲ ಕಾರ್ಮಿಕರ ವಯಸ್ಸು ನಿರ್ಧಾರದ ಬಗ್ಗೆ ದೃಢೀಕರಣ ಪತ್ರವನ್ನು ನೀಡುವಂತೆ ಅಧಿಕೃತ ಅಧಿಕಾರಿಯವರು ಕೋರಿದ್ದಲ್ಲಿ ಸದರಿಯವರಿಗೆ ಈ ಬಗ್ಗೆ ಪೂರ್ಣ ಸಹಕಾರವನ್ನೂ ನೀಡುವಂತೆ ಈ ಮೂಲಕ ಸೂಚಿಸಲಾಗಿದೆ.

ಮುಂದುವರಿದು ಸರ್ಕಾರದ ಕಾರ್ಯದರ್ಶಿಯವರು ಈ ಬಗ್ಗೆ ಸಹಕಾರ ನೀಡದೆ ಇದ್ದಲ್ಲಿ ಇದನ್ನು ತೀವ್ರವಾಗಿ ಸಹ ಪರಿಗಣಿಸಲಾಗಿವುದು ಎಂಬುದಾಗಿ ತಿಳುಹಿಸಿದ್ದು, ಬಾಲ ಕಾರ್ಮಿಕ ನಿವಾರಣೆ ಬಗ್ಗೆ ಯಾವುದೇ ಅಧಿಕೃತ ಪರಿಶೋಧನಾ ಅಧಿಕಾರಿಯವರು ನಡೆಸುವ ಪರಿಶೋಧನಾ ಕಾರ್ಯದಲ್ಲಿ ಭಾಗವಹಿಸುವಂತೆ ಕೋರಿದಾಗ ಭಾಗವಹಿಸಿ ಬಾಲ ಕಾರ್ಮಿಕರ ವಯಸ್ಸು ನಿರ್ಣಯ ದೃಢೀಕರಣ ಪತ್ರವನ್ನು ನೀಡುವಂತೆ ಅಸ್ಪತ್ರೆ: ಚಿಕಿತ್ಸಾಲಯದ ಎಲ್ಲಾ ವೈದ್ಯಾಧಿಕಾರಿಗಳ ಗಮನಕ್ಕೆ ತರುವುದು ಹಾಗೂ ಸರ್ಕಾರದ ಕಾರ್ಯದರ್ಶಿಯವರು ಸೂಚಿಸಿರುವಂತೆ ಬಾಲ ಕಾರ್ಮಿಕರ ನಿವಾರಣೆಗೆ ಪೂರ್ಣ ಸಹಕಾರ ನೀಡುವಂತೆ ಮತ್ತೊಮ್ಮೆ ಸೂಚಿಸಲಾಗಿದೆ.

ಈ ಬಗ್ಗೆ ನೀವು ಅವಶ್ಯಕವಿರುವ ಉಪಕರಣಗಳ ಕಿಟಗೆ ಬೇಡಿಕೆಯನ್ನು ಸಹ ಸಲ್ಲಿಸಲು ಸೂಚಿಸುತ್ತಾ ಈ ದಿಸೆಯಲ್ಲಿ ಕೈಗೊಂಡ ಕ್ರಮದ ಬಗ್ಗೆ ಮರುಟಪಾಲಿನಲ್ಲಿಯೇ ಮಾಹಿತಿಯನ್ನು ಒದಗಿಸಲು ಆದೇಶಿಸಲಾಗಿದೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

ಸಹಿ

ಗೆ,

1. ಡಾ................................

ವೈದ್ಯಕೀಯ ಅಧೀಕ್ಷಕರು, ಕಾರಾವಿ, ಆಸ್ಪತ್ರೆ..........................

2. ಡಾ................................

ಆಡಳಿತ ವಿಮಾ ವೈದ್ಯಾಧಿಕಾರಿಗಳು, ಕಾರಾವಿ............................

ಪ್ರತಿಯನ್ನು:

1. ಉಪ ನಿರ್ದೇಶಕರು ಕಾರಾವಿ, ಯೋ (ವೈ) ಸೇವೆ, ಬೆಂಗಳೂರು.

2. ವಲಯ ಆಡಳಿತ ವಿಮಾ ವೈದ್ಯಾಧಿಕಾರಿಗಳು

3. ಕ.ಪ್ರ

